# ಮುದೇನೂರು ಸಂಗಣ್ಣನವರ ಸಂಪಾದಿತ ಕೃತಿಗಳು

(ಎಂ.ಫಿಲ್ ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರಪಡಿಸಿದ ಸಂಪ್ರಬಂಧ)


ಸಂಶೋಧಕರು

ನಾಗಪ್ಪ ಕೆ

ನೋಂ ಸಂಖ್ಯೆ : ೧೬೦೧೦೫೦೩೦೦೧೫

ಮಾರ್ಗದರ್ಶಕರು

ಡಾ. ವೀರೇಶ ಬಡಿಗೇರ

ಪ್ರಾಧ್ಯಾಪಕರು

ಹಸ್ತಪ್ರತಿಶಾಸ್ತ್ರ ವಿಭಾಗ





ಭಾಷಾ ನಿಕಾಯ

ಹಸ್ತಪ್ರತಿಶಾಸ್ತ್ರ ವಿಭಾಗ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ-೫೮೩ ೨೭೬

೨೦೧೬-೧೭

# ಮುದೇನೂರು ಸಂಗಣ್ಣನವರ ಸಂಪಾದಿತ ಕೃತಿಗಳು

(ಎಂ.ಫಿಲ್ ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರಪಡಿಸಿದ ಸಂಪ್ರಬಂಧ)



ಸಂಶೋಧಕರು

**ನಾಗಪ್ಪ. ಕೆ**

**ನೋಂದಣಿ ಸಂಖ್ಯೆ: ೧೬೦೧೦೫೦೩೦೦೧೫**

ಮಾರ್ಗದರ್ಶಕರು

**ಡಾ. ವೀರೇಶ ಬಡಿಗೇರ**

ಪ್ರಾಧ್ಯಾಪಕರು

ಹಸ್ತಪ್ರತಿಶಾಸ್ತ್ರ ವಿಭಾಗ



**ಹಸ್ತಪ್ರತಿಶಾಸ್ತ್ರ ವಿಭಾಗ**

ಭಾಷಾ ನಿಕಾಯ

**ಕನ್ನಡ ವಿಶ್ವವಿದ್ಯಾಲಯ, ಹಂಪಿ**

ವಿದ್ಯಾರಣ್ಯ-೫೮೩ ೨೭೬

೨೦೧೬-೧೭

# ಮಾರ್ಗದರ್ಶಕರ ದೃಢೀಕರಣ ಪತ್ರ

**ನಾಗಪ್ಪ ಕೆ.** ಅವರು ನನ್ನ ಮಾರ್ಗದರ್ಶನದಲ್ಲಿ **"ಮುದೇನೂರು ಸಂಗಣ್ಣನವರ ಸಂಪಾದಿತ ಕೃತಿಗಳು"** ಎಂಬ ಸಂಶೋಧನಾ ಸಂಪ್ರಬಂಧವನ್ನು ಕನ್ನಡ ವಿಶ್ವವಿದ್ಯಾಲಯದ ಹಸ್ತಪ್ರತಿಶಾಸ್ತ್ರ ವಿಭಾಗಕ್ಕೆ ಎಂ.ಫಿಲ್. ಪದವಿಗಾಗಿ ಸಿದ್ಧಪಡಿಸಿರುತ್ತಾರೆ.

ಪ್ರಸ್ತುತ ಸಂಪ್ರಬಂಧವು ಮೂಲವಾಗಿದ್ದು, ಈ ಮೊದಲು ಯಾವುದೇ ಪದವಿಗಾಗಿ ಇಲ್ಲವೆ ಪ್ರಕಟಣೆಗಾಗಿ ಸಲ್ಲಿಸಿರುವುದಿಲ್ಲ ಎಂದು ಈ ಮೂಲಕ ದೃಢೀಕರಿಸಲಾಗಿದೆ.

ಮಾರ್ಗದರ್ಶಕರು

**ಡಾ. ವೀರೇಶ ಬಡಿಗೇರ**
ಪ್ರಾಧ್ಯಾಪಕರು
ಹಸ್ತಪ್ರತಿಶಾಸ್ತ್ರ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ–೫೮೩ ೨೭೬

ದಿನಾಂಕ :

ಸ್ಥಳ : ವಿದ್ಯಾರಣ್ಯ

# ಸಂಶೋಧಕರ ಘೋಷಣಾ ಪತ್ರ

ಡಾ. ವೀರೇಶ ಬಡಿಗೇರ, ಪ್ರಾಧ್ಯಾಪಕರು ಅವರ ಮಾರ್ಗದರ್ಶನದಲ್ಲಿ **"ಮುದೇನೂರು ಸಂಗಣ್ಣನವರ ಸಂಪಾದಿತ ಕೃತಿಗಳು"** ಎಂಬ ಸಂಶೋಧನಾ ಸಂಪ್ರಬಂಧವನ್ನು ಸಿದ್ಧಪಡಿಸಿ, ಎಂ.ಫಿಲ್. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯದ ಹಸ್ತಪ್ರತಿಶಾಸ್ತ್ರ ವಿಭಾಗಕ್ಕೆ ಸಾದರಪಡಿಸುತ್ತಿದ್ದೇನೆ.

ಈ ಸಂಪ್ರಬಂಧವನ್ನು ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲ. ಇದರ ಯಾವುದೇ ಭಾಗ ಎಲ್ಲಿಯೂ ಪ್ರಕಟಣೆಗೊಳಿಸಿಲ್ಲ. ಇದು ನನ್ನ ಸ್ವತಂತ್ರವಾದ ಸಂಶೋಧನಾ ಅಧ್ಯಯನವಾಗಿದೆ ಎಂದು ಈ ಮೂಲಕ ಪ್ರಮಾಣೀಕರಿಸುತ್ತೇನೆ.

ಸಂಶೋಧಕರು

**ನಾಗಪ್ಪ ಕೆ.**
ಎಂ.ಫಿಲ್. ಸಂಶೋಧನಾ ವಿದ್ಯಾರ್ಥಿ
ಹಸ್ತಪ್ರತಿಶಾಸ್ತ್ರ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ-೫೮೩ ೨೭೬

ದಿನಾಂಕ : 20/02/2012
ಸ್ಥಳ : ವಿದ್ಯಾರಣ್ಯ

# ಪರಿವಿಡಿ

# ಅಧ್ಯಾಯ : ಒಂದು

೧.೧. ಪ್ರಸ್ತಾವನೆ

೧.೨. ಉದ್ದೇಶ

೧.೩. ವ್ಯಾಪ್ತಿ

೧.೪. ಸ್ವರೂಪ

೧.೫. ಸಂಗಣ್ಣನವರ ಕುರಿತು ಬಂದ ಬರಹಗಳ ಸಮೀಕ್ಷೆ

## ಅಧ್ಯಾಯ-೧

# ಅಧ್ಯಯನದ ಉದ್ದೇಶ, ವ್ಯಾಪ್ತಿ ಮತ್ತು ಸ್ವರೂಪ

### ೧.೧. ಪ್ರಸ್ತಾವನೆ

ಕನ್ನಡ ಸಾಹಿತ್ಯ ಪ್ರಾಚೀನ ಕಾಲದಿಂದಲೂ. ವಿವಿಧ ಸ್ಥಿತ್ಯಂತರಗಳೊಂದಿಗೆ ಬೆಳೆಯುತ್ತಾ ಬಂದಿದೆ. ಹತ್ತನೇ ಶತಮಾನದಲ್ಲಿ ಕವಿರಾಜಮಾರ್ಗಕಾರ, ಪಂಪ, ಪೊನ್ನ, ರನ್ನ, ನಾಗಚಂದ್ರ ಮುಂತಾದವರ ಕಾವ್ಯಗಳು ಕನ್ನಡ ಸಾಹಿತ್ಯ ಲೋಕವನ್ನು ಶ್ರೀಮಂತಗೊಳಿಸಿದವು.

ಹನ್ನೆರಡನೆಯ ಶತಮಾನದ ವಚನ ಸಾಹಿತ್ಯದ ದೇಶಿ ಸಾಹಿತ್ಯದ ಮುಖಾಂತರ ಕ್ರಾಂತಿಯನ್ನು ಸೃಷ್ಟಿಸಿದ ಕಾಲವಾಗಿತ್ತು. ಹದಿಮೂರು ಮತ್ತು ಹದಿನಾಲ್ಕನೇ ಶತಮಾನದಲ್ಲಿ ಹರಿಹರ ರಾಘವಾಂಕ ಚಾಮರಸರು ರಾಜರ ಹಂಗನ್ನು ತೊರೆದು, ಶಿವಶರಣರ ಮೇಲೆ, ಭಕ್ತರ ಮೇಲೆ, ಸಾಮಾನ್ಯ ಜನರ ಮೇಲೆ, ಚಂಪೂರಗಳೆ, ಸಾಂಗತ್ಯ ಹಾಗೂ ಷಟ್ಪದಿಗಳ ರೂಪದಲ್ಲಿ ಕೃತಿ ರಚನೆ ಮಾಡಿದರು.

ಹದಿನೈದನೆ ಶತಮಾನದಲ್ಲಿ ಕುಮಾರವ್ಯಾಸ ಮಹಾಭಾರತದ ಕಥಾವಸ್ತು ಆಧರಿಸಿ, ಷಟ್ಪದಿಯ ವಿವಿಧ ಲಯಗಳನ್ನು ಸಮರ್ಥವಾಗಿ ದುಡಿಸಿಕೊಂಡು ಕಾವ್ಯ ರಚಿಸಿದ. ಹದಿನಾರನೆ ಶತಮಾನದಲ್ಲಿ ಕನಕದಾಸರು, ಪುರಂದರದಾಸರು ಕೀರ್ತನೆಗಳ ರೂಪದಲ್ಲಿ ಸಾಹಿತ್ಯ ರಚನೆ ಮಾಡಿದರು.

ಹೀಗೆ ಪರಂಪರಾನುಗತವಾಗಿ ಸಾಹಿತ್ಯ ರೂಪ ತಾಳಿತು. ತಾಳೆಗರಿ , ಚರ್ಮ, ಶಾಸನಗಳಂತಹ ರೂಪದಲ್ಲಿದ್ದ ಹಸ್ತಪ್ರತಿಗಳನ್ನು ಸಂಪಾದಿಸುವ ಕಾರ್ಯ ನಂತರ ನಡೆಯಿತು.

ಈ ಕಾಲಘಟ್ಟದಲ್ಲಿ ವಸಾಹತುಶಾಯಿಯ ಪ್ರಭಾವ ಕರ್ನಾಟಕಕ್ಕೆ ಬಂದಿತು. ಇಲ್ಲಿರುವ ಸಾಹಿತ್ಯ, ಶಾಸನ, ಹಸ್ತಪ್ರತಿಗಳನ್ನು ಕಂಡು ಬೆರಗಾದರು. ತಾವು ಬಂದ ಕಾರ್ಯವನ್ನು ಮರೆತು 'ನೀವು ಯಾವ ಕಾಲದಲ್ಲಿದ್ದೀರಿ' ಎಂದು ಕನ್ನಡಿಗರಿಗೆ ತಿಳುವಳಿಕೆ ನೀಡಿದರು. ಶ್ರಮಪಟ್ಟು ಅಕ್ಷರಗಳನ್ನು ಕಲಿತರು. ಹೂತುಹೋಗಿದ್ದ ಶಾಸನ, ಹಸ್ತಪ್ರತಿ, ಸ್ಮಾರಕ ನಾಣ್ಯಗಳು ಸಂಗ್ರಹಿಸಿ ಸಂಪಾದಿಸಿದರು.

ಪಾದ್ರಿಗಳು ಹಾಕಿ ಕೊಟ್ಟ ಮಾರ್ಗದಲ್ಲಿಯೇ ನಮ್ಮ ಕನ್ನಡ ವಿದ್ವಾಂಸರು, ವಿಮರ್ಶಕರು, ಸಂಶೋಧಕರು ಪ್ರಾಚೀನ ಕೃತಿಗಳನ್ನು ಸಂಗ್ರಹಿಸಿ ಸಂಪಾದಿಸಿದರು. ಇದರಲ್ಲಿ ಹರ್ಮನ್ ಮೊಗ್ಲಿಂಗ್, ಜೆ. ಗ್ಯಾರೆಟ್, ಬಿ. ಎಲ್. ರೈಸ್, ಎಫ್. ಕಿಟೆಲ್ ಅವರ ಪಾತ್ರ ಪ್ರಮುಖವಾದದ್ದು.

ಹೀಗೆ ಸಾಹಿತ್ಯ ಸಂಪಾದನೆಯು ಆಧುನಿಕ ಕನ್ನಡ ಸಾಹಿತ್ಯದ ವರೆಗೂ ಬೆಳೆದು ಬಂದಿತು. ಇಲ್ಲಿ ಜಾನಪದೀಯ ಅಂಶಗಳನ್ನು ಆಧಾರವಾಗಿಟ್ಟುಕೊಂಡು ಜಾನಪದ ಸಾಹಿತ್ಯವನ್ನು ಸಂಪಾದಿಸಿದರು. ಅದರಲ್ಲಿ ಪ್ರಮುಖರೆಂದರೆ, ಗದ್ದಿಗಿ ಮಠ, ಜೀ.ಶಂ. ಪರಮಶಿವಯ್ಯ, ಹಾ.ಮಾ. ನಾಯಕ, ಮುಂತಾದವರು.

ಪಾದ್ರಿಗಳು, ಆಧುನಿಕ ವಿದ್ವಾಂಸರು, ಜಾನಪದ ವಿದ್ವಾಂಸರಲ್ಲಿ ಹೆಸರಿಸಲೇ ಬೇಕಾದ ಮತ್ತೊಂದು ದೇಸಿ ವ್ಯಕ್ತಿ ಎಂದರೆ ಮುದೇನೂರು ಸಂಗಣ್ಣ. ಅವರು ಜಾನಪದ ತಜ್ಞರಾಗಿ, ನಾಡೋಜ ಎನಿಸಿಕೊಂಡ ಅವರು ಕೇಶಿರಾಜನ ಶಬ್ದಮಣಿ ದರ್ಪಣದಂತೆ, ಕಿಟೆಲ್ ಅವರ ಕನ್ನಡ ಇಂಗ್ಲೀಷ್ ಕೋಶದಂತೆ ಚಿಗಟೇರಿ ಪದ ಕೋಶವನ್ನು ರಚಿಸಿ ಜಾನಪದ ಸಾಹಿತ್ಯ ಸಂಸ್ಕೃತಿಗಳ ಕಿಂಕರ ಎನಿಸಿಕೊಂಡಿದ್ದಾರೆ. ಅಂಥ ಪ್ರಮುಖರ ಸಾಹಿತ್ಯ ಮತ್ತು ಅವರ ತಾತ್ವಿಕತೆ ಕುರಿತು ಇಲ್ಲಿ ಅಧ್ಯಯನ ಮಾಡಲಾಗಿದೆ.

## ೧.೨. ಅಧ್ಯಯನದ ಉದ್ದೇಶ

ಆಧುನಿಕ ಕನ್ನಡ ನವೋದಯ ಸಾಹಿತ್ಯದಲ್ಲಿ ಕುವೆಂಪು, ಬೇಂದ್ರೆ, ಸಿಂ.ಪಿ. ಲಿಂಗಣ್ಣ, ಮಧುರ ಚೆನ್ನರಂತೆ, ಮುದೇನೂರು ಸಂಗಣ್ಣನವರು ಕವಿತೆಗಳನ್ನು ಪ್ರೌಢಶಾಲೆಯಲ್ಲಿರುವಾಗಲೇ ರಚಿಸಿ ಪತ್ರಿಕೆಗಳಲ್ಲಿ ಪ್ರಕಟಿಸಿದ್ದರು. ಜಾನಪದ ಸಾಹಿತ್ಯ ಕಡೆಗೆ ಒಲವು ತೋರಿದರು. ಈ ಕ್ಷೇತ್ರದಲ್ಲಿದ್ದು ಒಂದು ಹಳ್ಳಿಯಲ್ಲಿ ತಂಬಾಕು ವ್ಯಾಪಾರ ಮಾಡುವ ಕೃಷಿಕನಾಗಿ, ಮೌಖಿಕ ಸಾಹಿತ್ಯವನ್ನು ಸಂಪಾದಿಸಿ ಪ್ರಕಟಿಸಿದರು.

೧೯೪೫ರಲ್ಲಿ ಪ್ರೌಢಶಾಲೆಯಲ್ಲಿರುವಾಗಲೆ ಕವಿತೆಗಳನ್ನು ರಚಿಸಿ ವಾಚನ ಮಾಡಿ ಬೇಷ್ ಎನಿಸಿಕೊಂಡವರು. ಬಳ್ಳಾರಿ, ಹರಪನಹಳ್ಳಿಯಲ್ಲಿ ನಡೆದ ಏಕೀಕರಣ ಚಳುವಳಿಯಲ್ಲಿ ಭಾಗವಹಿಸಿ ಒಂದು ತಿಂಗಳುಗಳ ಕಾಲ ಜೈಲುವಾಸ ಅನುಭವಿಸಿದರು.

೧೯೬೮ರಲ್ಲಿಯೇ ಮೌಖಿಕ ಕೃತಿಗಳನ್ನು ಸಂಪಾದಿಸಿ ಜಾನಪದ ಕೃಷಿ ಮಾಡಿದರು. ಜಾನಪದ ಅಕಾಡಮಿಯ ಸದಸ್ಯರಾಗಿ ಕನ್ನಡ ವಿ.ವಿ.ಯ ಸೆನೆಟ್ ಸದಸ್ಯರಾಗಿ ಕಾರ್ಯ ನಿರ್ವಹಿಸಿದ್ದರು. ಯಾವುದೇ ರೀತಿಯ ಪ್ರಶಸ್ತಿ ಪುರಸ್ಕಾರಗಳಿಗೆ ಕೈ ಯೊಡ್ಡಿದವರಲ್ಲ. ಜಾನಪದ ಸಾಹಿತ್ಯದ ಬೆಳವಣಿಗೆ ಕಂಡು ಹಲವು ಪ್ರಶಸ್ತಿಗಳು ತಾವಾಗಿಯೇ ಬಂದು ಅವರನ್ನು ಗೌರವಿಸಿವೆ.

ಶ್ರೀಮಂತ ಮನೆಯಲ್ಲಿದ್ದು ಇಂಟರ್ ಮೀಡಿಯಟ್ ವರೆಗೆ ಓದಿಕೊಂಡು ಬೆಳೆದಿದ್ದಾರೆ. ಆದರೆ ಒಬ್ಬ ವ್ಯಾಪಾರಿಗನಾಗಿ ಜಾನಪದ ಸಾಹಿತ್ಯದ ಕೃತಿಗಳನ್ನು ಸಂಪಾದನೆ ಮಾಡಿರುವುದು ನಿಜಕ್ಕೂ ಅವರ ವಿದ್ವತ್ತು ಅಪಾರವಾದದ್ದು. ಜನಪದ ಸಾಹಿತ್ಯ ಅಂಶಗಳು, ನಾಟಕಗಳು, ಕಥೆಗಳು, ಮೌಖಿಕ ಸಾಹಿತ್ಯದೊಂದಿಗೆ ಮಣ್ಣಾಗಿ ಹೋಗುತ್ತವೆ. ಅಂತಹ ಜನಪದ ರಂಗ ನಾಟಕಗಳನ್ನೂ ಸಂಪಾದಿಸಿ ಕೊಟ್ಟಿದ್ದಾರೆ.

ಪ್ರತಿಯೊಂದು ಹಳ್ಳಿಗೆ ಹೋಗಿ ಕ್ಷೇತ್ರ ಕಾರ್ಯದ ಮೂಲಕ ಸಂಗ್ರಹಿಸಿದ ಇವರು ಹಳ್ಳಿಯ ಬದುಕಿನ ವಾಸ್ತವತೆಯನ್ನು ಕಟ್ಟಿಕೊಡುತ್ತಾರೆ. ಪ್ರತಿಭಾವಂತ ಕಲಾವಿದರನ್ನು ಗುರುತಿಸಿ, ಅವರಿಂದ ಜಾನಪದ ಆಟಗಳನ್ನು ಅವರ ಬದುಕಿನ ಚಿತ್ರಣವನ್ನು ಕಲಾವಿದರ ವೃತ್ತಿಜೀವನವನ್ನು ವಿವರಿಸುತ್ತಾರೆ.

ಮುದೇನೂರು ಸಂಗಣ್ಣನವರ ಸಂಪಾದಿತ ಕೃತಿಗಳು ಸ್ತ್ರೀ ಶೋಷಣೆಯನ್ನು ಬಿಚ್ಚಿಡುತ್ತವೆ. ಪುರುಷ ಪ್ರಧಾನ ಭೌದ್ದಿಕ ವರ್ಗದವರ ಶೋಷಣೆಯನ್ನು ಹೇಳುತ್ತವೆ. ಸಂಪಾದಿತ ಕೃತಿಗಳು ಕಲಾವಿದರ ವೃತ್ತಿಯನ್ನು ವಿವರಿಸುತ್ತವೆ. ಸಂಸ್ಕೃತಿ ಸಂಪ್ರದಾಯವನ್ನು ಕಟ್ಟಿಕೊಡುತ್ತವೆ. ದೈವಗಳನ್ನು ಚರ್ಚಿಸುತ್ತವೆ. ದಿನ ಬಳಸುವ ವ್ಯವಹಾರ ಭಾಷೆಗಳನ್ನು ಅವರು ಆಟಗಳಲ್ಲಿ ಹೇಗೆ ಬಳಸುತ್ತಾರೆ ಎಂಬ ವಿಚಾರಗಳನ್ನು ತಿಳಿಸುತ್ತವೆ.

ಒಂದು ಹಳ್ಳಿಯಲ್ಲಿರುವ ಒಬ್ಬ ವ್ಯಕ್ತಿಯು ರಾಜಕೀಯವಾಗಿ ಸ್ಕೌಟ್, ಗೈಡ್, ಸೈನಿಕನಾಗಿ ಹೇಗೆ ಬೆಳೆದ. ಎಂಬ ಜೀವನ ಚರಿತ್ರೆಯನ್ನು ಸಂಪಾದಿಸಿದ್ದಾರೆ. ಹೀಗೆ ಹಲವು ಕೃತಿಗಳ ಒಳಗಿನ ವಿಚಾರಗಳನ್ನು ವಿಮರ್ಶಿಸಿ ಹೇಳುವ ಉದ್ದೇಶ ಈ ಅಧ್ಯಯನದ್ದಾಗಿದೆ.

## ೧.೩. ಅಧ್ಯಯನದ ವ್ಯಾಪ್ತಿ

'ಮುದೇನೂರು ಸಂಗಣ್ಣನವರ ಸಂಪಾದಿತ ಕೃತಿಗಳು' ಎಂಬ ಪರಿಕಲ್ಪನೆಯನ್ನು ಅಧ್ಯಯನದ ದೃಷ್ಟಿಯಿಂದ ಐದು ಅಧ್ಯಾಯಗಳಾಗಿ ವಿಂಗಡಿಸಿದ್ದೇನೆ. ಆದರೆ ಸಂಗಣ್ಣನವರು ಮೂವತ್ತಕ್ಕಿಂತ ಹೆಚ್ಚು ಕೃತಿಗಳನ್ನು ರಚಿಸಿದ್ದಾರೆ ಮತ್ತು ಸಂಪಾದಿಸಿದ್ದಾರೆ. ಆ ಕೃತಿಗಳಲ್ಲಿ ನಾನು ಸಂಪಾದಿತ ಕೃತಿಗಳನ್ನಷ್ಟೇ ನನ್ನ ಅಧ್ಯಯನಕ್ಕೆ ಆಯ್ಕೆ ಮಾಡಿಕೊಂಡಿದ್ದೇನೆ.

ಸಾಹಿತ್ಯಿಕ ಕೃತಿಗಳು ಮುಕ್ತಕಗಳು, ಜನಪದ ತ್ರಿಪದಿಗಳು, ಹಳ್ಳಿಯ ಪದಗಳು, ನಾಟಕಗಳು, ಭಾಷಾಂತರ ಕೃತಿಗಳು, ಕವನ ಸಂಕಲನಗಳು, ಕಥೆಗಳು, ಆಟಗಳು, ಭಾಷಾ ನಿಘಂಟುಗಳು, ಜೀವನ ಚರಿತ್ರೆ, ಗೊಂದಲಿಗರ ಕಥಾ ಪ್ರಸಂಗಗಳು, ಮೌಖಿಕ ಸಾಹಿತ್ಯದ ರೂಪಗಳು ಜಾನಪದ ಸಾಹಿತ್ಯದ ಅಂಶಗಳನ್ನು ಬಿತ್ತರಿಸುತ್ತವೆ. ಆದರೆ ಅಧ್ಯಯನದ ಹಿನ್ನೆಲೆಯಲ್ಲಿ ಸಂಪಾದಿತ ಕೃತಿಗಳಿಗೆ ಸೀಮಿತ ವ್ಯಾಪ್ತಿ ಹರಡಿಕೊಂಡಿದೆ.

## ೧.೪. ಅಧ್ಯಯನದ ಸ್ವರೂಪ

ಕನ್ನಡ ಸಾಹಿತ್ಯವು ಸದಾ ಬೆಳಕನ್ನು ಕೊಡುವ ಸಾಲು ದೀಪ್ತಿಗಳಿದ್ದಂತೆ ಇದು ಪರಂಪರಾನುಗತವಾಗಿ ಶಾಸನ, ಗದ್ಯ, ಪದ್ಯ, ಕಾವ್ಯ, ದೇಶಿಯ ನೆಲೆಗಳಲ್ಲಿ ನದಿಯಂತೆ ಹರಿದು ಬಂದಿದೆ. ಒಂದೆಡೆಯಿಂದ ಇನ್ನೊಂದೆಡೆಗೆ ನಡೆದಾಡುವ ವಿಶ್ವ ಕೋಶವಿದ್ದಂತೆ. ಸಂಗಣ್ಣನವರು ಚಲಿಸುವ ಮೋಡಗಳಂತೆ ಚಲಿಸಿ ಮೌಖಿಕ ಸಾಹಿತ್ಯವನ್ನು ಲಿಖಿತ ರೂಪಕ್ಕೆ ತಂದು ಕೊಟ್ಟಿದ್ದಾರೆ.

ಸಮರೋಪಾದಿಯಲ್ಲಿ ಜಾನಪದೀಯ ಅಂಶಗಳನ್ನು ಸಂಗಣ್ಣನವರು ಸಂಪಾದಿಸಿದ್ದಾರೆ. ಎಲ್ಲಿಯೂ ತನ್ನ ಸಾಧನೆಯನ್ನು ಹೇಳಿಕೊಂಡವರಲ್ಲ. ತನ್ನ ಸ್ವಾಭಿಮಾನಕ್ಕೆ ದಕ್ಕೆ ಬರದಂತೆ ನಡೆದುಕೊಂಡವರು. ಹೊಗೆಸೊಪ್ಪಿನ ವ್ಯಾಪಾರಿಯಾಗಿದ್ದರೂ ಕನ್ನಡ ಸಾಹಿತ್ಯಗೆ ಸಾಂಸ್ಕೃತಿ ಗಟ್ಟಿ ನೆಲೆಯನ್ನು ಕಟ್ಟಿ ಕೊಟ್ಟವರು. ಇಂತವರು ಸಾಹಿತಿಗಳಿಗೆ, ಕಲಾವಿದರಿಗೆ, ನಾಟಕಕಾರರಿಗೆ, ಬುದ್ಧಿ ಜೀವಿಗಳಿಗೆ, ಸಂಸ್ಕೃತಿಯ ಚಿಂತಕರಿಗೆ ಚಿರಪರಿಚಿತರಾಗಿ ಉಳಿದಿದ್ದಾರೆ. ಇವರು ಜನಪದ ಸಂಸ್ಕೃತಿಯ ಕಿಂಕರರಾಗಿ ವಾಗ್ಮಿಗಳಾಗಿ ವಿದ್ವಾಂಸರಾಗಿ,

ಚಿಂತಕರಾಗಿ ಆಕಾಶದೆತ್ತರಕ್ಕೆ ಬೆಳೆದರು, ಹಳ್ಳಿಯ ಪ್ರತಿನಿಧಿಯಾಗಿ ಸ್ತ್ರೀಯರ ಶೋಷಣೆಯನ್ನು ಕಂಡು ಪ್ರಶ್ನಿಸುತ್ತಾರೆ. ಪುರುಷ ಪ್ರಧಾನ ಸಮಾಜದ ದಬ್ಬಾಳಿಕೆಯನ್ನು ತಮ್ಮ ಬರಹಗಳಲ್ಲಿ ಖಂಡಿಸುತ್ತಾರೆ. ಸಮಾಜ, ರಾಷ್ಟ್ರದ ಬಗ್ಗೆ ಗೌರವ ಭಾವನೆ ಬೆಳೆಸಿಕೊಂಡಿದ್ದರು. ಯಾವಾಗಲೂ ಬಾಳ್ವೆಯೇ ಬೆಳಕು ಎಂದು ನುಡಿಯುತ್ತಿದ್ದರು.

ಮುದೇನೂರು ಸಂಗಣ್ಣನವರ ಆಪ್ತಮಿತ್ರರು, ಒಡನಾಡಿಗಳು, ಅವರೊಂದಿಗೆ ಇದ್ದ ಅನುಭವಗಳನ್ನು ಲೇಖನಗಳ ರೂಪದಲ್ಲಿ ವ್ಯಕ್ತ ಪಡಿಸಿದ್ದಾರೆ. ಸುಮಾರು ಹದಿನೆಂಟು ಲೇಖನಗಳು ಬಂದಿವೆ. ಡಾ.ಶಿವರಾಮ ಕಾರಂತರಿಂದ ಹಿಡಿದು ಆನಂದ್ ಋಗ್ವೇದಿಯಂತಹ ಲೇಖಕರು ಅವರೊಂದಿಗೆ ಚರ್ಚಿಸಿದ, ಅನುಭವಗಳನ್ನು ಹೇಳಿದ್ದಾರೆ. ಕೆಲವರು ಜೀವನದ ಚಿತ್ರಣಗಳನ್ನು ವರ್ಣಿಸಿದರೆ. ಕೆಲವರು ಅವರ ಭಾಷಾ ಪಾಂಡಿತ್ಯವನ್ನು ಅಭಿವ್ಯಕ್ತಪಡಿಸಿದ್ದಾರೆ. ನಾಟಕಗಳ ಸ್ವರೂಪವನ್ನು ವರ್ಣಿಸಿದ್ದಾರೆ. ಕೆಲವರು ಅವರ ಊರು ಕೇರಿಯ ಜೀವನವನ್ನು ಚಿತ್ರಿಸಿದ್ದಾರೆ.

ಅಧ್ಯಾಯ ಎರಡರಲ್ಲಿ ಪ್ರೌಢಶಾಲೆಯ ಜೀವನದಿಂದಲೇ, ಕವಿತೆ, ಕಥೆಗಳನ್ನು ಬರೆದು ಪ್ರಕಟಿಸುತ್ತಿದ್ದ ಸೃಜನಶೀಲತೆ ಹುಟ್ಟಿದ ಸ್ಥಳ, ತಂದೆ-ತಾಯಿ ಕುಟುಂಬದ ಜೀವನವನ್ನು ಪರಿಚಯಿಸಿದ್ದೇನೆ. ಹೀಗೆ ಹುಟ್ಟಿನಿಂದ ಹಿಡಿದು ಸಾಯುವವರೆಗೆ ಸಾಧಿಸಿದ ಜೀವನ ಕ್ರಮವನ್ನು ವಿವರಿಸಲಾಗಿದೆ.

ಇಂಟರ್ ಮೀಡಿಯೆಟ್ ಓದಿ ಕೃಷಿಕನಾಗಿ, ವ್ಯಾಪಾರಿಯಾಗಿ, ಮನೆಯ ಜವಾಬ್ದಾರಿ ವಹಿಸಿಕೊಂಡು ಮರಾಠಿ, ಹಿಂದಿ, ಬಂಗಾಲಿ ಭಾಷೆಗಳನ್ನು ಕಲಿತು ಕನ್ನಡಕ್ಕೆ ಅನುವಾದಿಸಿದ್ದರು. ಸಂಗೀತ, ನಾಟಕ, ನೃತ್ಯ, ಪ್ರಿಯರಾಗಿ ಜಾನಪದೀಯ ಅಂಶಗಳನ್ನು ಮೈಗೂಡಿಸಿಕೊಂಡು ಜಾನಪದ ನಾಟಕಗಳನ್ನು ರಚಿಸಿದರು. 'ಸೂಳೆ ಸಂಕವ್ವೆ' ಎಂಬ ವಚನಕಾರ್ತಿಯ ಒಂದೇ ವಚನವನ್ನು ಆಧರಿಸಿ ನಾಟಕ ರಚಿಸಿದ ಸಾಧನೆ ಅತ್ಯುನ್ನತವಾದದ್ದು.

ಈ ಅಧ್ಯಾಯದಲ್ಲಿ ಸುಮಾರು ಮೂವತ್ತು ಕೃತಿಗಳ ಕಥಾವಸ್ತುವನ್ನು ಸಂಕ್ಷಿಪ್ತವಾಗಿ ಪರಿಚಯಿಸಿದ್ದೇನೆ. ಮನುಷ್ಯ ಸಮಾಜ ಜೀವಿ ಸಮಾಜವನ್ನು ಬಿಟ್ಟು ಬದುಕಲು ಸಾಧ್ಯವಿಲ್ಲ. ಪ್ರೀತಿ, ವಾತ್ಸಲ್ಯ, ಪ್ರೇಮದಂತ ಮಾನವೀಯ ಮೌಲ್ಯಗಳನ್ನು ಕಥೆಗಳು ತಿಳಿಸುತ್ತವೆ. ಅಂತರ್ ಜಾತಿ ವಿವಾಹ, ವಿಧವೆಯರಿಗೆ ಮರು ಜೀವನವನ್ನು ನೀಡುವ ಕಥಾವಸ್ತುವನ್ನು ಸಂದೇಶದ ಮೂಲಕ ವಿವರಿಸುತ್ತಾರೆ.

ಭಾರತೀಯ ನಾರಿ ಧರ್ಮವನ್ನು ಕಾಪಾಡುವ, ಹೆಣ್ಣಿನ ಧ್ವನಿಯನ್ನು ತೋರಿಸುವ ಪೌರಾಣಿಕ ರಾಮಾಯಣಕ್ಕೂ ವಾಲ್ಮೀಕಿ ರಾಮಾಯಣಕ್ಕೂ ಇರುವ ಭಿನ್ನ ರೂಪದಲ್ಲಿ 'ಚಿತ್ರಪಟ' ರಾಮಾಯಣವನ್ನು ರಚಿಸಿದ್ದಾರೆ. ಒಬ್ಬ ನರ ಮನುಷ್ಯನ ರಕ್ತವನ್ನು ಕುಡಿದು ಬದುಕುವ ವ್ಯಕ್ತಿಯು ಸಹ ಬುದ್ಧ ಕೊಡುವ ಉಪದೇಶದ ಮಂತ್ರಕ್ಕೆ ಪರಿವರ್ತನೆಯಾಗಿ ಬಾಳುತ್ತಾನೆ. ಇಂತಹ ಮೇಲಿನ ವೈಚಾರಿಕ ಅಂಶಗಳನ್ನು ಅಧ್ಯಾಯದಲ್ಲಿ ಪರಿಚಯಿಸಲಾಗಿದೆ.

ಅಧ್ಯಾಯ ಮೂರರಲ್ಲಿ ಸಂಪಾದಿಸಿದ ಕೃತಿಗಳ ಕಥಾವಸ್ತುವನ್ನು ವಿಮರ್ಶೆಗೆ ಒಳಪಡಿಸಲಾಗಿದೆ. ಹಳ್ಳಿಯ ದೈವ, ಕಣದ ಪರಿಕಲ್ಪನೆ, ಕೋಲಾಟ, ಅಣ್ಣ-ತಂಗಿಯರ ಸಂಬಂಧಗಳ ಬೆಸುಗೆ ಹೊಲಗದ್ದೆಗಳಲ್ಲಿ

ಹಾಡುವ, ಬೀಸುವಾಗ ಹಾಡುವ, ಮದುವೆ ಕಾರ್ಯಗಳಲ್ಲಿ ಹಾಡುವ ಜಾನಪದ ಅಂಶಗಳನ್ನು ಚರ್ಚಿಸಲಾಗಿದೆ. ಪ್ರತಿಭಾವಂತ ಗೊಂದಲಿಗರ ವ್ಯಕ್ತಿತ್ವ ಗುರುತಿಸಿ ಅವರು ಹಾಡುವ ಆಟವನ್ನು ಸಂಪಾದಿಸಿದ್ದಾರೆ. ಈ ಆಟಗಳು ಮಾನವೀಯ ಮೌಲ್ಯವನ್ನು ಕಟ್ಟಿ ಕೊಡುತ್ತವೆ. ಪ್ರಾಮಾಣಿಕ ಜೀವನವನ್ನು ವೈಭವಿಕರಿಸುತ್ತವೆ. ಮಾನವರ ಘನತೆಯನ್ನು ಎತ್ತಿ ಹಿಡಿಯುತ್ತವೆ. ಅನ್ಯಾಯ, ಅಧರ್ಮದಲ್ಲಿ ನಡೆದವರಿಗೆ ಲೋಕದಲ್ಲಿ ಉಳಿಗಾಲ ಇಲ್ಲ. ವ್ಯಕ್ತಿಯು ತನ್ನನ್ನು ತಾನೇ ಶೋಷಣೆ ಮಾಡಿಕೊಳ್ಳುತ್ತಾನೆ ಹೊರತು ಕುಲವರ್ಗಗಳ ಭೇಧವಿಲ್ಲವೆಂಬುದನ್ನು ಸಾರುತ್ತವೆ. ಸಮಾಜ, ಸಮುದಾಯ  ಕುಟುಂಬ ಎಂದ ಮೇಲೆ ಕಷ್ಟ ಕಾರ್ಪಣ್ಯಗಳು ಇರುತ್ತವೆ. ಅವುಗಳನ್ನು ನಿಭಾಯಿಸುವ ಶಕ್ತಿ ಇರಬೇಕು. ಇಂತಹ ವಿಶಿಷ್ಟ ವಿಚಾರಗಳನ್ನು ಈ ಅಧ್ಯಾಯದಲ್ಲಿ ವಿಮರ್ಶಿಸಲಾಗಿದೆ.

ಅಧ್ಯಾಯ ನಾಲ್ಕರಲ್ಲಿ ಚಿಗಟೇರಿ ಗ್ರಾಮವನ್ನಾಧರಿಸಿ ರಚಿಸಿದ ಚಿಗಟೇರಿ ಪದ ಕೋಶದ ಕುರಿತು ಚರ್ಚಿಸಿದ್ದೇನೆ. ಇದು ಕೇಶಿರಾಜನ ಶಬ್ದಮಣಿ ದರ್ಪಣ, ಕಿಟೆಲ್‌ರ ಕನ್ನಡ ಇಂಗ್ಲೀಷ್ ನಿಘಂಟಿನಂತೆ ಶ್ರೇಷ್ಠವಾದದ್ದು. ಕಿಟೆಲ್ ಕೋಶದಲ್ಲಿ ಇಲ್ಲದ ಶಬ್ದ ಪದಗಳನ್ನು ಸಂಗಣ್ಣನವರು ಇಲ್ಲಿ ಸಂಗ್ರಹಿಸಿದ್ದಾರೆ. 'ಅ' ದಿಂದ 'ಳ' ಕಾರದ ವರೆಗೂ ಶಬ್ದಗಳ ರಚನೆ ಇದೆ. ಕ್ಷೇತ್ರ ಕಾರ್ಯ ಮಾಡುವುದರ ಮೂಲಕ ಗ್ರಾಮ್ಯ ಭಾಷೆಯ ಪದಗಳನ್ನು ಸಂಗ್ರಹಿಸಿ ಕೊಟ್ಟಿದ್ದಾರೆ. ಗಬಸ್ದುಳಿ, ಗದ್ಮಿ, ಕಾಟುಗ, ಚಾವತ್ತು, ದಸಾರಿ, ನೆಲಹಡುಕ, ಸಾಲಿ' ಎಂಬ ಹೊಸ ಪದಗಳು ಸಂಗ್ರಹಗೊಂಡಿವೆ.

ಅಧ್ಯಾಯ ಐದರಲ್ಲಿ ಕೃಷಿಕನಾದ ಸಂಗಣ್ಣನವರು ಹಳ್ಳಿಯ ವ್ಯಕ್ತಿಯಾಗಿ ಜಾನಪದ ತಜ್ಞರಾಗಿ ಬೌದ್ಧಿಕವಾಗಿ ಬೆಳೆದ ಸಂಗತಿಗಳನ್ನು ಚರ್ಚಿಸಲಾಗಿದೆ. ಹಳ್ಳಿಯೇ ಸಾಹಿತ್ಯ ಕ್ಷೇತ್ರದ ತಾತ್ವಿಕ ನೆಲೆಯಾಗಿದೆ. ತಂಬಾಕು ವ್ಯಾಪಾರಿಯಾಗಿ ನಿಪ್ಪಾಣಿ, ಮಹಾರಾಷ್ಟ್ರಗಳಲ್ಲಿ ಹೋಗಿ, ಮರಾಠಿ ಸ್ನೇಹಿತರ ಜೊತೆ ಒಡನಾಟ ಇಟ್ಟುಕೊಂಡು, ಮರಾಠಿ ಕಲಿಯುತ್ತಾ, ಮರಾಠಿ ಸಾಹಿತ್ಯದ ಅಭಿರುಚಿ ಗಳಿಸುತ್ತಾರೆ.

ಶಾಲೆಯಲ್ಲಿ ಓದುತ್ತಿರುವಾಗಲೇ ಸಾಹಿತ್ಯದ ಅಭಿರುಚಿ ಬೆಳೆಸಿಕೊಳ್ಳುತ್ತಾರೆ. ಸೌಹಾರ್ದತೆಯ ಸಾತ್ವಿಕ ಸ್ವಭಾವವುಳ್ಳ ಸಂಗಣ್ಣನವರು ಸಾಂಸ್ಕೃತಿಕ ಮನಸ್ಸುಳ್ಳವರು. ಅವರ ಬಗೆಗಿನ ಅಧ್ಯಯನವೆಂದರೆ ಅದು ಒಂದು ಪ್ರದೇಶದ ಸಾಂಸ್ಕೃತಿಕ ಹಾಗೂ ಸಾಮುದಾಯಿಕ ಅಧ್ಯಯನವಾಗಿದೆ.

### ೧.೫ ಸಂಗಣ್ಣನವರ ಕುರಿತು ಬಂದ ಬರಹಗಳ ಸಮೀಕ್ಷೆ

ಎಂ.ಎಂ. ಶಿವಪ್ರಕಾಶರವರು ೨೦೧೪ರಲ್ಲಿ ಜಾನಪದ ತಜ್ಞ ಮುದೇನೂರು ಸಂಗಣ್ಣ ಎನ್ನುವ ಲೇಖನ ಸಂಕಲನವನ್ನು ಸಂಪಾದಿಸಿ ಪ್ರಕಟಿಸಿದ್ದಾರೆ. ಇದರಲ್ಲಿ ಒಟ್ಟು ಮೂರು ಭಾಗಗಳನ್ನು ಮಾಡಲಾಗಿದೆ. ಮೊದಲ ಭಾಗ ದರ್ಶನದಲ್ಲಿ ಒಂಭತ್ತು ಲೇಖನಗಳಿವೆ. ಡಾ.ಶಿವರಾಮ ಕಾರಂತರಿಂದ ಹಿಡಿದು ಬಿ.ರಾಮಪ್ರಸಾದ್ ಗಾಂಧಿ ವರೆಗಿನ ಕನ್ನಡದ ಮಹತ್ವದ ಲೇಖಕರ ಲೇಖನಗಳು ಇದರಲ್ಲಿವೆ.

ಡಾ. ಶಿವರಾಮ ಕಾರಂತರು 'ಬಯಲು ಸೀಮೆಯ ಸಂಗಣ್ಣ' ಎಂಬ ಬರಹದಲ್ಲಿ ಚಿಗಟೇರಿ ಎಂಬ ಹಳ್ಳಿಯ ಪರಿಸರ, ಸಾಮಾಜಿಕ ವ್ಯವಸ್ಥೆ, ಅನಕ್ಷರಸ್ಥ ಯುವಕರ ಓಡಾಟ, ಮೂಲ ಕೃಷಿ ಜೀವನವನ್ನು ಕುರಿತು ತಿಳಿಸುತ್ತಾರೆ. ಬಳ್ಳಾರಿ ಜಿಲ್ಲೆಯಲ್ಲಿ ತುಂಗಭದ್ರ ನದಿ ನೀರು ಕೃಷಿಗೆ ಬಳಕೆಯಾದರೂ,

ಚಿಗಟೇರಿಯಂತಹ ಹಳ್ಳಿಗೆ ಇನ್ನೂ ಬಂದಿಲ್ಲ ಎಂದು ವಿಷಾದಿಸುತ್ತಾರೆ. ಈ ಬರಗಾಲದ ನಾಡಿನಲ್ಲಿದ್ದ ಮುದೇನೂರು ಸಂಗಣ್ಣನ ಸ್ನೇಹವನ್ನು ಶಿವರಾಮ ಕಾರಂತರು ಬೆಳೆಸಿಕೊಂಡಿದ್ದಾರೆ. ಅದರಲ್ಲೂ ಒಬ್ಬ ಹೊಗೆಸೊಪ್ಪಿನ ಮಿತ್ರರ ಸ್ನೇಹ ಜೀವಿಯಾಗಿ ಸದಾ ಒಡನಾಟವನ್ನು ಇಟ್ಟುಕೊಂಡಿದ್ದರು. ಮುದೇನೂರು ಸಂಗಣ್ಣನವರು ಯಾವುದೇ ಒಂದು ಕಾರ್ಯಕ್ರಮ ಇಟ್ಟುಕೊಂಡರೂ ಅದರಲ್ಲಿ ಶಿವರಾಮ ಕಾರಂತರು ಪಾಲ್ಗೊಳ್ಳುತ್ತಿದ್ದರು. ಕೇವಲ ಸಾಮಾನ್ಯ ಜನರೊಡನೆ ಅಷ್ಟೇ ಸ್ನೇಹವನ್ನು ಇಟ್ಟುಕೊಳ್ಳದೆ, ಶಿಕ್ಷಕ, ವರ್ಗದವರು, ವಕೀಲರು ದೊಡ್ಡ ಅಧಿಕಾರಿಗಳ ಜೊತೆ ಸ್ನೇಹವನ್ನು ಸಂಗಣ್ಣನವರು ಇಟ್ಟುಕೊಂಡಿದ್ದರು.

ಡಾ. ಬಸವರಾಜ ಮಲಶೆಟ್ಟಿಯವರು 'ಮುದೇನೂರು ಸಂಗಣ್ಣ' ಎಂಬ ಬರಹದಲ್ಲಿ, ಮುದೇನೂರು ಸಂಗಣ್ಣನವರ ಸಾಹಿತ್ಯದ ಸಾಧನೆ, ಜೀವನ, ಬೆಳೆದು ಬಂದ ಬಗೆಯನ್ನು ಕುರಿತು ತಿಳಿಸಿದ್ದಾರೆ. ಸಂಗಣ್ಣನವರ ವ್ಯಕ್ತಿತ್ವದ ಸ್ವರೂಪವನ್ನು ವರ್ಣಿಸಲಾಗಿದೆ. ಸಂಗಣ್ಣನವರು ಪ್ರಾಥಮಿಕ ಶೈಕ್ಷಣಿಕ ಹಂತದಲ್ಲೆ ಕವಿತೆಗಳ ರಚನೆಯ ಮೂಲಕ ಸಾಹಿತ್ಯದ ವೇದಿಕೆಯ ಮೆಟ್ಟಿಲನ್ನು ಹತ್ತಿದರು. ಯಾವುದೇ ಜಾತಿ, ಭೇದ, ಭಾವ ಎನ್ನದೇ, ಎಲ್ಲರೊಂದಿಗೂ ಸಹಭಾಗಿತ್ವದಿಂದ ಇದ್ದರು. ಕೃಷಿಕನಾದರೂ, ಸ್ತ್ರೀಯರಿಗೆ, ದಲಿತ ವರ್ಗದವರಿಗೆ ಆಗುವ ಅನ್ಯಾಯಗಳನ್ನು ಸಾಹಿತ್ಯದ ಮೂಲಕ ತೋರಿಸಿ ಕೊಟ್ಟರು. ಕುಟುಂಬ, ಸಮಾಜ, ವ್ಯಾಪಾರ ಇವುಗಳ ನಡುವಿನ ಜವಾಬ್ದಾರಿಯನ್ನು ಕುರಿತು ಹೇಗೆ ನಿರ್ವಹಿಸಬೇಕು ಎಂಬ ಆಶಯ ಈ ಲೇಖನದಲ್ಲಿ ಒಳಗೊಂಡಿದೆ. ಸಮಾಜ ಮತ್ತು ರಾಜಕಾರಣಿಗಳ ಒಡನಾಟವನ್ನು ಸಂಗಣ್ಣನವರು ಇಟ್ಟುಕೊಂಡಿದ್ದರು. ಜೊತೆಗೆ ಸಂಗಣ್ಣನವರ ಮನಸ್ಸು ನಿಷ್ಕಲ್ಮಶದಿಂದ ಕೂಡಿತ್ತು. ಮುಗ್ಧ ಸ್ವಭಾವ ಮುಕ್ತವಾಗಿ ಮಾತನಾಡುವ ಸ್ವಾತಂತ್ರ್ಯ ಹಾಗೂ ಜ್ಞಾನದ ಸಂಪತ್ತನ್ನು ಉಳ್ಳವರಾಗಿದ್ದರು. ಸಮಾನತೆ, ಭ್ರಾತೃತ್ವ, ಸಹೋದರತ್ವ, ಸಹಭಾಗಿತ್ವದಂತಹ ಸಂಗಣ್ಣನವರ ಮಾನವೀಯ ಕಳಕಳಿಗಳು ಈ ಲೇಖನದ ಆಶಯವಾಗಿದೆ.

ಡಾ. ಮೃತ್ಯುಂಜಯ ರುಮಾಲೆಯವರು 'ಜಾನಪದವನ್ನು ಹಾಸುಂಡ ಸಂಗಣ್ಣ' ಎಂಬ ತಮ್ಮ ಲೇಖನದಲ್ಲಿ ಮುದೇನೂರು ಸಂಗಣ್ಣ ಜಾನಪದ ಸಾಹಿತ್ಯ ಕ್ಷೇತ್ರದಲ್ಲಿ ಹೇಗೆ ಬೆಳೆದರು, ಹೇಗೆ ಬೆಳೆದರು ಎನ್ನುವ ಪ್ರಶ್ನೆ ಹಾಕಿಕೊಂಡು ಅದಕ್ಕೆ ಪ್ರಮುಖ ಕಾರಣ ಹಳ್ಳಿಯೇ ಆಗಿತ್ತು ಎನ್ನುವ ಉತ್ತರವನ್ನು ಕೊಡುತ್ತಾರೆ. ಆದ್ದರಿಂದ ಜಾನಪದ ಸಾಹಿತ್ಯ ಕ್ಷೇತ್ರಕ್ಕೆ ಯಾವುದೇ ತರಹ ಅಡ್ಡಿ ಆತಂಕಕ್ಕೆ ಎಡೆ ಮಾಡಿ ಕೊಟ್ಟಿಲ್ಲ. ಆ ಹಳ್ಳಿಯು ಒಂದು ರೀತಿಯಲ್ಲಿ ಸಾಹಿತ್ಯಕ್ಕೆ ಬೇಕಾದ 'ವಸ್ತು ದ್ರವ್ಯವನ್ನು ಒದಗಿಸುವ ಗಂಗೋತ್ರಿ'ಯಾಗಿತ್ತು ಎಂದು ಸಂಗಣ್ಣನವರ ಆಶಯವನ್ನು ವ್ಯಕ್ತಪಡಿಸುತ್ತಾರೆ. ಜಾನಪದ ವ್ಯಕ್ತಿಗಳ ಕಲಾ ಪ್ರತಿಭೆಯನ್ನು ಗುರುತಿಸಿ, ಪ್ರಶಸ್ತಿ ಪುರಸ್ಕಾರಗಳನ್ನು ಜಾನಪದ ಸಾಹಿತ್ಯ ಅಕಾಡೆಮಿಯಿಂದ ಮುದೇನೂರು ಸಂಗಣ್ಣನವರು ಸ್ವತಹ ಕೊಡಿಸುತ್ತಿದ್ದರು ಎಂದು ಈ ಲೇಖನದಲ್ಲಿ ತಿಳಿಸಲಾಗಿದೆ. ಯಾವುದೇ ಕಾರ್ಯಕ್ರಮಗಳಲ್ಲಿ ಮುದೇನೂರು ಸಂಗಣ್ಣ ಭಾಗವಹಿಸಿದರೆ, ಮೊದಲು ದೇಶಿಯ ಸಂಸ್ಕೃತಿಯನ್ನು ಕುರಿತು ಮಾತನಾಡುತ್ತಿದ್ದರು. ಜಾನಪದರ ಜೀವನ, ಕಲೆ, ಸಂಸ್ಕೃತಿ, ಸಾಹಿತ್ಯ, ಕಲಾವಿದರ ಬದುಕಿನ ಚಿತ್ರಣ, ಅವರ ಮೇಲೆ ಇರುವ ಅನುಕಂಪ, ಕಾಳಜಿ, ಆತ್ಮವಿಶ್ವಾಸ, ಪ್ರೀತಿ, ಸ್ನೇಹ ಮುಂತಾದ ವಿಚಾರಗಳ ಮುಖ್ಯ ಧ್ಯೇಯವೇ ಈ ಲೇಖನದ ಸಾರವಾಗಿದೆ.

ಗುಡಿಹಳ್ಳಿ ನಾಗರಾಜ ಅವರು 'ರಾಷ್ಟ್ರೀಯ ಸ್ತರವಾಗದ ಜಾನಪದ ಅಧ್ಯಯನ' ಎಂಬ ಲೇಖನದಲ್ಲಿ ಮುದೇನೂರು ಸಂಗಣ್ಣನವರು ಅಕಾಡೆಮಿಕ್ ಆಗಿ ಬೆಳೆಯದಿದ್ದರೂ, ಹಳ್ಳಿಯ ಪರಿಸರದಲ್ಲಿಯೇ ಇದ್ದು ಜಾನಪದ ತಜ್ಞರಾಗಿ ಬೆಳೆದರು. ಜಾನಪದರ ಒಡನಾಟದಿಂದ. ಹಳ್ಳಿಜನರ ಮನಸ್ಸನ್ನು ಗೆದ್ದು ಅವರಿಂದ ಹಲವಾರು ಕೃತಿಗಳನ್ನು ಜೀವನದ ಉದ್ದಕ್ಕೂ ಪ್ರೀತಿ ವಿಶ್ವಾಸದ ಮುಖಾಂತರ ಸಂಪಾದಿಸಿದರು. ಅಲ್ಲದೇ ಮರಾಠಿ, ಬಂಗಾಳಿ ಕೃತಿಗಳನ್ನು ಕನ್ನಡಕ್ಕೆ ಅನುವಾದಿಸಿದ ಮುಂತಾದ ವಿಚಾರಗಳನ್ನು ಈ ಲೇಖನದಲ್ಲಿ ತಿಳಿಸಲಾಗಿದೆ. ಮುದೇನೂರು ಸಂಗಣ್ಣನವರ ಪ್ರತಿಯೊಂದು ಕೃತಿಗಳು, ನಾಟಕ, ತ್ರಿಪದಿ, ಸಾಹಿತ್ಯಿಕ ರೂಪಕಗಳಲ್ಲಿ ಕಂಡುಬರುತ್ತವೆ. ಹೀಗೆ ಜಾನಪದ ಸಾಹಿತ್ಯವು ಕಲೆಯಾಗಿ ಉಳಿಯದೇ ಒಂದು ಮಾನವ ಸಮುದಾಯದ ಸಂವೇದನೆಯಾಗಿ ಉಳಿದಿದೆ. ಅವುಗಳನ್ನು ಪೋಷಿಸಿ, ಸಂರಕ್ಷಿಸುವ ಹೊಣೆಗಾರಿಕೆ ಪ್ರತಿಯೊಬ್ಬ ನಾಗರಿಕನ ಕರ್ತವ್ಯವಾಗಿದೆ. ಜಾನಪದರು ಅಕ್ಷರಗಳನ್ನು ಕಲಿತವರಲ್ಲ. ಆದರೂ ಅವರ ಕಲಾ ಸಾಹಿತ್ಯವನ್ನು ಸ್ವೀಕರಿಸಬೇಕು ಎಂಬ ಧ್ಯೇಯ ಈ ಲೇಖನದಲ್ಲಿ ಕಂಡು ಬರುತ್ತದೆ.

ಎಂ.ಎಂ. ಶಿವಪ್ರಕಾಶ ಅವರು 'ಜನಪದ ಲೋಕದ ಜಂಗಮ ಸಾಹಿತಿ' ಎಂಬ ಬರಹದಲ್ಲಿ. ಮುದೇನೂರು ಸಂಗಣ್ಣನವರ ಸ್ವಭಾವ, ಸಂಪ್ರದಾಯ ಮತ್ತು ಮುಖ್ಯ ಧ್ಯೇಯಗಳನ್ನು ಕುರಿತು ತಿಳಿಸಲಾಗಿದೆ. ಸಂಗಣ್ಣನವರು ಲೋಹಿಯಾ, ಅರವಿಂದರ ಪ್ರಭಾವಕ್ಕೆ ಒಳಗಾಗಿದ್ದರು. ಹಾಗಾಗಿ ಪರಂಪರಾನುಗತವಾಗಿ ಬಂದ ಜಾನಪದ ಕಲೆಗಳ ಬಗ್ಗೆ ಅಧಿಕೃತವಾಗಿ ಮಾತನಾಡುತ್ತಿದ್ದರು. ಹಲವು ಕವಿತೆಗಳನ್ನು ರಚಿಸಿದರೂ ಸಹ ಕವಿಯಾಗಿ ಗುರುತಿಸಿಕೊಳ್ಳಲಿಲ್ಲ. ಜಾನಪದ ಸಾಹಿತಿಯಾಗಿ ಗುರುತಿಸಿಕೊಂಡರು. ಚಿಕ್ಕವರು, ದೊಡ್ಡವರೆನ್ನದೆ ಎಲ್ಲರೊಂದಿಗೆ ಬೆರೆಯುವ ಮುಗ್ಧ ಸ್ವಭಾವದವರು ಸಂಗಣ್ಣನವರು. ಪ್ರತಿಯೊಂದು ಕ್ಷೇತ್ರಗಳಲ್ಲಿಯು ಆಸಕ್ತಿ ಹೊಂದಿದ್ದರು. ತಂಬಾಕು ವ್ಯಾಪಾರಿಯಾಗಿ ಬೇರೆ ರಾಜ್ಯಗಳಲ್ಲಿ ಸ್ನೇಹಿತರ ಒಡನಾಟ ಇಟ್ಟುಕೊಂಡು, ಸಾಹಿತ್ಯ ಸಂಗೀತ ಕಾರ್ಯಕ್ರಮಗಳಲ್ಲಿ ಭಾಗವಹಿಸುತ್ತಿದ್ದರು. ಮನೆಗಳಲ್ಲಿಯೇ ವಿಚಾರ ಗೋಷ್ಠಿಗಳನ್ನು ಹಮ್ಮಿಕೊಳ್ಳುತ್ತಿದ್ದರು. ಹೀಗೆ ಜಾನಪದರ ಒಡನಾಟದಿಂದ ಅನೇಕ ಮಹತ್ವದ ಕೃತಿಗಳನ್ನು ಸಂಪಾದಿಸಿದರು. ಅನೇಕ ಗೌರವ ಪ್ರಶಸ್ತಿಗಳಿಗೆ ಮುದೇನೂರು ಸಂಗಣ್ಣ ಭಾಜನರಾಗಿದ್ದರು. ಆದ್ದರಿಂದ ಸಂಗಣ್ಣನವರ ಶ್ರಮ, ಆಸಕ್ತಿ, ಅಭಿವ್ಯಕ್ತಿಯ ಸ್ವರೂಪವನ್ನು ಈ ಲೇಖನದಲ್ಲಿ ಚರ್ಚಿಸಲಾಗಿದೆ.

ವಸಂತ ಮಾಲವಿ ಅವರು "ಹಳ್ಳಿಯಲ್ಲೊಬ್ಬ ವಾಙ್ಮಯ ತಪಸ್ವಿ" ಎಂಬ ಲೇಖನದಲ್ಲಿ ಮುದೇನೂರು ಸಂಗಣ್ಣನವರು ಕೃಷಿಕನಾಗಿ, ವ್ಯಾಪಾರಿಗನಾಗಿ ಸಾಹಿತ್ಯ ಕ್ಷೇತ್ರದಲ್ಲಿ ಹೇಗೆ ಕೃಷಿ ಮಾಡಿದರು, ಅದಕ್ಕೆ ಪ್ರೇರಣೆಗಳೇನು ಎಂಬುದನ್ನು ತಿಳಿಸಿದ್ದಾರೆ. ಪ್ರಮುಖವಾಗಿ ಬಿ.ಎಂ.ಶ್ರೀ., ಮಾಸ್ತಿ, ದ.ರಾ.ಬೇಂದ್ರೆ ಅವರ ಪ್ರಭಾವ ಪ್ರೇರಣೆಗಳ ಕುರಿತು ವಿವರಿಸಿದ್ದಾರೆ. ಸಾಹಿತ್ಯ ಕ್ಷೇತ್ರದ ಮೂಲಕ ಸ್ತ್ರೀ ಶೋಷಣೆಯನ್ನು ಖಂಡಿಸುತ್ತಿದ್ದರು. ಸಾಮಾನ್ಯ ಜನರನ್ನು ಪ್ರೀತಿ ವಾತ್ಸಲ್ಯದಿಂದ ಕಾಣುತ್ತಾ ಗುರುವಾಗಿ, ಎಲ್ಲರಿಗೂ ಮಾರ್ಗದರ್ಶನ ನೀಡುತ್ತಿದ್ದರು. ಜಾತಿ ಎಂಬ ಹೀನಾ ಅಸಮಾನತೆಯನ್ನು ಮುಕ್ತವಾಗಿ ಖಂಡಿಸುತ್ತಿದ್ದರು ಎಂಬ ಮನೋಭಾವನೆ ಈ ಲೇಖನದಲ್ಲಿ ಕಂಡು ಬರುತ್ತದೆ.

ಎನ್. ಉಮೇಶ ಅವರು "ಜನಪದ ಲೋಕದ ಜೇನ್ಗೂಣ" ಎಂಬ ಲೇಖನದಲ್ಲಿ ಮುದೇನೂರು ಸಂಗಣ್ಣನವರು ಸಜ್ಜನಿಕೆಗೆ ಹೆಸರಾದವರು. ಯಾರ ಹೊಗಳಿಕೆ, ತೆಗಳಿಕೆಗೆ ಅಳುಕಿದವರಲ್ಲ. ಜಾನಪದ ಸಾಹಿತ್ಯದ ಜೊತೆಗೆ ಸಮಾಜ ಸೇವೆ, ಕರ್ನಾಟಕ ಏಕೀಕರಣ ಹೋರಾಟದಲ್ಲಿ ಪಾಲ್ಗೊಂಡಿದ್ದರು. ಕನ್ನಡ ಭಾಷೆಯ ಜೊತೆಗೆ ಮರಾಠಿ, ತೆಲುಗು, ಹಿಂದಿ, ಇಂಗ್ಲೀಷ್, ಬಂಗಾಳಿ ಭಾಷೆಗಳನ್ನು ಕಲಿತರು. ಆದುದರಿಂದ ಸಾಹಿತ್ಯಕ್ಕಾಗಿ ಅವಿರತವಾಗಿ ದುಡಿದರು ಎಂಬ ವಿಚಾರಗಳು ಈ ಲೇಖನದಲ್ಲಿ ಇರುವುದನ್ನು ತಿಳಿದುಕೊಳ್ಳಲಾಗಿದೆ. ಇನ್ನೂ ಚಿಗಟೇರಿ ಎಂಬ ಹಳ್ಳಿಯು ಕೈಗಾರಿಕಾ ಕ್ಷೇತ್ರವಾಗಿ, ಆಧುನಿಕ ತಾಂತ್ರಿಕತೆಯನ್ನು ಬಳಸಿಕೊಂಡು ಐತಿಹಾಸಿಕ ಕ್ಷೇತ್ರವಾಗಿ ಬೆಳೆದು ಬಂದಿದೆ. ಇದಕ್ಕೆ ಪ್ರಮುಖ ಕಾರಣ ಮುದೇನೂರು ಸಂಗಣ್ಣನವರ ಕೃತಿಗಳ ಅದರಲ್ಲಿರುವ ವೈಚಾರಿಕ ಪ್ರಜ್ಞೆ, ಭಾಷಾಪಾಂಡಿತ್ಯ ಜ್ಞಾನದ ದಾಹವೇ ಸಮಾಜ ಬದಲಾವಣೆಗೆ ಕಾರಣವಾಯಿತು. ಇವೆಲ್ಲ ಕಾರಣಗಳಿಂದ ಮುದೇನೂರು ಸಂಗಣ್ಣನವರಿಗೆ ಗೌರವ ಪುರಸ್ಕಾರಗಳು, ಪ್ರಶಸ್ತಿಗಳು, ಬಂದಿರುವುದನ್ನು ಈ ಲೇಖನದಲ್ಲಿ ವಿವರಿಸಲಾಗಿದೆ.

ಎಂ.ಎಂ. ಶಿವಪ್ರಕಾಶ ಅವರು 'ನೆಲಸಂಸ್ಕೃತಿಯ ಚಿಂತಕ' ಎಂಬ ಲೇಖನದಲ್ಲಿ ಮುದೇನೂರು ಸಂಗಣ್ಣನವರನ್ನು ಕುರಿತು ಈ ಕೆಳಕಂಡಂತೆ ಹೇಳುತ್ತಾರೆ ಕನ್ನಡನಾಡಿನ ನೆಲ, ಜಲ, ಸಂಸ್ಕೃತಿಯ ಉಳಿವು, ಜಾನಪದ ಪರಂಪರೆಯ ಬೆಳವಣಿಗೆಗಾಗಿಯೇ ದುಡಿದವರು ಎಂದು ತಿಳಿಸಿದ್ದಾರೆ. ಗೊಂದಲಿಗ ಎನ್ನುವ ವ್ಯಕ್ತಿಗಳ ಕಲಾಪ್ರತಿಭೆಯನ್ನು ಗುರುತಿಸಿ, ಅವರ ಜ್ಞಾನದ ಹರವನ್ನು ಸಹೃದಯರಿಗೆ ತಿಳಿಯಲು, ಸಮಾಜಕ್ಕೆ ನಾಟಕ ಹಾಗೂ ಆಟಗಳ ಮೂಲಕ ಆಡಿಸಿ ತೋರಿಸುವ, ಚಾಕ ಚಕ್ಯತೆ ಈ ಲೇಖನದಲ್ಲಿದೆ ಕನ್ನಡ ಭಾಷೆ, ಜನ ಸಂಸ್ಕೃತಿಗಾಗಿ, ಜಾನಪದರ ಉಳಿವಿಗಾಗಿ ದುಡಿದ ಹಿರಿಯ ಸಾಹಿತಿಗಳಿಗೆ ಕಲಾಪ್ರತಿಭೆಗಳಿಗೆ 'ನಾಡೋಜ' ಎಂಬ ಗೌರವ ಪದವಿಯನ್ನು ಪ್ರತಿವರ್ಷ ಕನ್ನಡ ವಿಶ್ವವಿದ್ಯಾಲಯ ಕೊಡುತ್ತದೆ. ಅದರಲ್ಲಿ ಮುದೇನೂರು ಸಂಗಣ್ಣನವರಿಗೆ ೨೦೦೬ರಲ್ಲಿ ನಾಡೋಜ ಪದವಿ ಎಂಬ ಗೌರವ ದೊರಕಿತು. ಎಂಬ ಮುಂತಾದ ವಿಚಾರಧಾರೆಗಳು ಈ ಲೇಖನದ ಮೂಲಕ ಹರಿದು ಬರುತ್ತವೆ.

ಬಿ. ರಾಮಪ್ರಸಾದ್ ಗಾಂಧಿಯವರು "ಜಾನಪದ ಜಂಗಮನಿಗೆ ನಾಡೋಜ" ಎಂಬ ಲೇಖನದಲ್ಲಿ ಮುದೇನೂರು ಸಂಗಣ್ಣನವರು ಒಬ್ಬ ಶ್ರೀಮಂತ ಮನೆತನದವರು. ಆದರೆ ಜಾನಪದರ ಒಡನಾಟದಿಂದ ಜನಪದರ ಕಲಾ, ಪ್ರತಿಭೆಯನ್ನು ಗುರುತಿಸಿ, ಅವರಿಂದ ಮೌಖಿಕ ಸಾಹಿತ್ಯವನ್ನು ಸಂಗ್ರಹಿಸಿ ಸಮಾಜಕ್ಕೆ ನೀಡಿದವರು. ಜಾನಪದ ನಾಟಕಗಳನ್ನು ರಚಿಸಿ, ಪ್ರದರ್ಶನದ ಮೂಲಕ ತೋರಿಸುತ್ತಿದ್ದರು. ಹೀಗೆ ವಿವಿಧ ಕ್ಷೇತ್ರಗಳಲ್ಲಿ ಸಂಗಣ್ಣನವರು ಸಾಹಿತ್ಯ ಕೃಷಿ ಮಾಡಿದರು. ಎಂಬ ಉಲ್ಲೇಖ ಈ ಲೇಖನದ ಆಶಯವಾಗಿದೆ. ಜಾನಪದ ಸಾಹಿತ್ಯ ಸಂಗ್ರಹದ ಜೊತೆಗೆ ಭಾಷಾ ನಿಘಂಟನ್ನು ರಚಿಸಿದ. ಸಂಗ್ರಹಿಸಿದ ಕೀರ್ತಿ ಸಂಗಣ್ಣನವರಿಗೆ ಸಲ್ಲುತ್ತದೆ.

ಎರಡನೆ ಭಾಗ ಸಂದರ್ಶನದಲ್ಲಿ ಐದು ಲೇಖನಗಳಿವೆ. 'ವೈದೇಹಿಯಿಂದ ಹಿಡಿದು ಡಾ. ಸುಜಾತ ಅಕ್ಕಿ'ವರೆಗಿನ ಕನ್ನಡದ ಮಹತ್ವದ ಲೇಖಕರ ಲೇಖನಗಳು ಇದರಲ್ಲಿವೆ.

ವೈದೇಹಿ ಅವರು "ಸಧಭಿರುಚಿಯ ಜಾನಪದ ವಿದ್ವಾಂಸ-ಮುದೇನೂರು ಸಂಗಣ್ಣ" ಎಂಬ ಲೇಖನದಲ್ಲಿ ಮುದೇನೂರ ಸಂಗಣ್ಣನವರು ಹಳ್ಳಿಯ ಜನಪದರ ಸೊಗಡಿನ ನಡುವೆ ಬೆಳೆದು ಬಂದವರು. ಹಳ್ಳಿಯ ಜನರು ಹೇಳುವ ಹಾಡನ್ನು ಕೇಳಿ ಬೆಳೆದವರು. ಮದುವೆ ಸಮಾರಂಭಗಳಲ್ಲಿ ಗಂಡು-ಹೆಣ್ಣಿಗೆ, ಹೆಣ್ಣು-ಗಂಡಿಗೆ ಹೇಳುವ ಒಡಪುಗಳನ್ನು ಕೇಳಿ ಬೆಳೆಯುವುದರ ಮೂಲಕ ಸಂಗ್ರಹಗಳಲ್ಲಿ ತೊಡಗಿ ಸಂಪಾದಿಸಿದರು. ಜಾನಪದವೆಂಬುದು ಮನುಷ್ಯನ ಕಾಯಿಲೆಯನ್ನು ಗುಣಪಡಿಸುವ ಆತ್ಮ ವಿಶ್ವಾಸ ಹೆಚ್ಚಿಸುವ ಔಷಧ. ಜಾನಪದ ಸಾಹಿತ್ಯಕ್ಕೆ ಯಾವುದೇ ರೀತಿಯ ಜಾತಿ ಇಲ್ಲ. ಆದರೆ ಜನಪದರಲ್ಲಿ, ಕುಲಗಳಲ್ಲಿ ಜಾತಿ ವ್ಯವಸ್ಥೆ ಇದೆ. ಜಾನಪದ ಕಲಾವಿದರ ಜೊತೆಗೆ ಜಾನಪದ ಸಾಹಿತ್ಯ ಅಕಾಡೆಮಿಯ ವ್ಯವಸ್ಥೆಯನ್ನು ಕುರಿತು ಈ ಲೇಖನದಲ್ಲಿ ಚರ್ಚಿಸಲಾಗಿದೆ. ಜನರ ಮನಸ್ಸನ್ನು ಸೆಳೆಯ ಬಲ್ಲ ಜಾನಪದ ಕಲಾವಿದ 'ಲೋಕಾಪುರ ಕೃಷ್ಣಾಜಿ ದೇಶಪಾಂಡೆ'ಯ ಹೆಸರನ್ನು ಈ ಲೇಖನದಲ್ಲಿ ತಿಳಿಸಲಾಗಿದೆ. ಕನ್ನಡ ವಿಶ್ವವಿದ್ಯಾಲಯದಲ್ಲಿ ನಡೆಯುವ ನುಡಿ ಹಬ್ಬಕ್ಕೆ ದೇಶ-ವಿದೇಶಗಳಲ್ಲಿರುವ ತಜ್ಞರೆ ಹೆಚ್ಚಾಗಿ ಬರುತ್ತಾರೆ. ಆದರೆ ಜಾನಪದ ಸಾಹಿತ್ಯ ಆಸಕ್ತರು ಕಡಿಮೆ. ಮೊದಲು ಜಾನಪದರನ್ನು ಗುರ್ತಿಸಬೇಕು ಎಂಬ ಅಸಮಾಧಾನ ವ್ಯಕ್ತ ಪಡಿಸುವ ಚರ್ಚೆ ಈ ಲೇಖನದಲ್ಲಿದೆ.

ಡಾ.ರಹಮತ್ ತರೀಕೆರೆಯವರು "ಮುದೇನೂರ ಸಂಗಣ್ಣ ಅವರೊಂದಿಗೆ" ಎಂಬ ಲೇಖನದಲ್ಲಿ ಮುದೇನೂರು ಸಂಗಣ್ಣನವರ ಪೂರ್ವಿಕರ ಜೀವನ ಸಂಗಣ್ಣನವರ ಜೀವನ, ವ್ಯವಹಾರ, ಜಾನಪದ ಸಂಗ್ರಹ, ಸಾಹಿತ್ಯ ಪ್ರೇರಣೆ, ಹಳ್ಳಿ ಜನಪದರ ಒಡನಾಟ, ಸ್ನೇಹ ಸಂಬಂಧದ ಪರಿಕಲ್ಪನೆ, ಏಕೀಕರಣಕ್ಕಾಗಿ ಹೋರಾಟ ಚಳುವಳಿಯಲ್ಲಿ ಭಾಷಣ, ತಂಬಾಕು ವ್ಯಾಪಾರಿಯಾಗಿ ಸಂಗೀತ, ಸಾಹಿತ್ಯದ ಒಲವು, ಆಂಧ್ರ, ಮಹಾರಾಷ್ಟ್ರ ಸ್ನೇಹಿತರ ಜೊತೆ ಒಡನಾಟ, ಜನಪದ ಕಲಾವಿದರ ಜೊತೆ ಸಂಪರ್ಕ, ಜಾನಪದ ನಾಟಕ, ಕವಿತೆ ಮುಂತಾದ ವಿಚಾರಗಳನ್ನು ಮುಖಾಮುಖಿಯಾಗಿ ಈ ಲೇಖನದಲ್ಲಿ ಚರ್ಚಿಸಲಾಗಿದೆ.

ಜಾನಪದರ ಮೌಖಿಕ ವಿಚಾರಗಳನ್ನು ಸಂಗ್ರಹಿಸುವ, ಸಂಪಾದಿಸುವ ಹಾಗೂ ಜನಪದ ವ್ಯಕ್ತಿಗಳನ್ನು ನೇರವಾಗಿ ಭೇಟಿ ಮಾಡಿದಾಗ ನಡೆದಂತಹ ಘಟನಾವಳಿಗಳನ್ನು ಚರ್ಚಿಸಲಾಗಿದೆ. ಜಾನಪದರ ವೃತ್ತಿ, ಜೀವನ ಪರಿಚಯ, ಗೊಂದಲಿಗರ, ಕಿನ್ನರಿ ಜೋಗಿಗಳು ನಡೆದುಕೊಳ್ಳುವ ಮಂಟೇಸ್ವಾಮಿ, ಏಳುಕೊಳ್ಳದ ಎಲ್ಲಮ್ಮ, ಮೈಲಾರಲಿಂಗ ದೇವರ ಹೆಸರುಗಳನ್ನು ಪರಿಚಯಿಸಲಾಗಿದೆ. ಹಿಂದೂ-ಮುಸ್ಲಿಂರು ಒಟ್ಟುಗೂಡಿ ಮಾಡುವ "ಮೊಹರಂ ಹಬ್ಬ"ದಂತಹ ಆಚರಣೆ "ನಾವೆಲ್ಲ ಒಂದೇ" ಎಂಬ ವೈಚಾರಿಕತೆಯನ್ನು ಕುರಿತು ಲೇಖನದಲ್ಲಿ ಚರ್ಚಿಸಲಾಗಿದೆ. ದೇಶಿಯ ಭಾಷೆಯನ್ನು ಉಳಿಸುವ, ಬೆಳೆಸುವ ಅಭಿಮಾನದ ಜೊತೆಗೆ ಹಿಂದಿ, ಇಂಗ್ಲೀಷನ್ನು ಕಲಿಯಬೇಕು ಎಂಬ ವೈಚಾರಿಕ ಪ್ರಜ್ಞೆ ಅರಿವು ಈ ಲೇಖನದಲ್ಲಿ ತಿಳಿದುಕೊಳ್ಳಲಾಗಿದೆ.

ಮುದೇನೂರು ಸಂಗಣ್ಣನವರ ಹೆಚ್ಚು ಕೃತಿಗಳು ಗ್ರಾಮೀಣ,ದೇಶಿಯ ಸೊಗಡನ್ನು ತಿಳಿಸಿಕೊಡುತ್ತವೆ. ಬಯಲಾಟ, ತೊಗಲುಗೊಂಬೆ ಆಟ, ಕೃಷ್ಣ ಪಾರಿಜಾತ ಇವು ಹೆಚ್ಚು ಅನುವಂಶಿಕವಾಗಿ, ವೃತ್ತಿ

ಪರಂಪರಾಗತವಾಗಿ ಬಂದಿವೆ. ಈ ಜಾನಪದರ ಉಳಿವು, ಜಾನಪದ ರಕ್ಷಣೆ ಕುರಿತು ಚರ್ಚಿಸಲಾಗಿದೆ. ಬೇಂದ್ರೆ, ಶಿವರಾಮ ಕಾರಂತ ನಡುವಿನ ಒಡನಾಟದ ಬಗ್ಗೆ ತಿಳಿದುಕೊಳ್ಳಲಾಗಿದೆ.

ಡಾ. ಮಂಜುನಾಥ ಬೇವಿನ ಕಟ್ಟಿಯವರು "ಹಿರಿಯ ವಿದ್ವಾಂಸರಾದ ಶ್ರೀ ಮುದೇನೂರ ಸಂಗಣ್ಣ ಅವರೊಂದಿಗೆ ಸಂವಾದ" ಎಂಬ ಬರಹದಲ್ಲಿ ಮುದೇನೂರು ಸಂಗಣ್ಣನವರು ೧೯೪೬ರಲ್ಲಿ ಯಾವುದೇ ಆಧುನಿಕ ಉಪಕರಣ ಇಲ್ಲದ ಸಂದರ್ಭದಲ್ಲಿ, ಜನಪದರು ಹಾಡುವ, ಹೇಳುವ, ಕಥೆಗಳ ಪ್ರೇರಣೆಯಿಂದ ಜಾನಪದ ಅಧ್ಯಯನ, ಸಂಗ್ರಹ, ಸಂಪಾದನೆಯಲ್ಲಿ ತೊಡಗಿದರು. ಸ್ತ್ರೀಯರು ಬೀಸುವಾಗ ಹಾಡುವ, ಬೀಸುವ ಕಲ್ಲಿನ ನಾದ, ಲಯ,ಸಂಗೀತ, ಸಾಹಿತ್ಯ ಸಂಗ್ರಹ ಸೃಷ್ಟಿಗೆ ಕಾರಣವಾಗಿದೆ. ಹಲಸಂಗಿ ಗೆಳೆಯರ ಗುಂಪು, ಅ.ನ.ಕೃ., ತ.ರಾ.ಸು, ಮಾಸ್ತಿ, ಬಿ.ಎಂ.ಶ್ರೀ, ಇವರ್‍ಯಾರು ಕೂಡ ಶಾಸ್ತ್ರೀಯ ದೃಷ್ಟಿಯಿಂದ ಜಾನಪದವನ್ನು ನೋಡಲಿಲ್ಲ ಎಂಬ ಚರ್ಚೆ ಈ ಲೇಖನದಲ್ಲಿದೆ. ನಂತರದಲ್ಲಿ ಹಾ.ಮಾ. ನಾಯಕರು ಶಾಸ್ತ್ರೀಯವಾಗಿ ಅಧ್ಯಯನ ಮಾಡಲು ಬುನಾದಿ ಹಾಕಿದರು. ಕಾಲ ಗತಿಸಿದಂತೆ ಜಾನಪದ ಅಧ್ಯಯನವನ್ನು ವಿಶ್ವವಿದ್ಯಾಲಯಗಳಲ್ಲಿ ವಿಭಜಿಸಿ, ಪ್ರತ್ಯೇಕವಾಗಿ ಅಧ್ಯಯನ ಮಾಡಿರುವ ವಿಚಾರವನ್ನು ಉದಾಹರಣೆಯ ಮೂಲಕ ತಿಳಿಸಲಾಗಿದೆ. ಉತ್ತರ ಕರ್ನಾಟಕದಲ್ಲಿ ಜಾನಪದ ಸಂಗ್ರಹ, ಪ್ರೇರಣೆ ಹಾಗೂ ಪಿ.ಎಚ್.ಡಿ ಅಧ್ಯಯನದ ವಿಷಯವಾಗಿ ಗದ್ದಗಿ ಮಠರು 'ಕನ್ನಡ ಜಾನಪದ ಗೀತೆಗಳು' ಎಂಬ ವಿಷಯ ಕುರಿತು ಪ್ರಬಂಧ ರಚಿಸಿದರು. ಅದೇ ಮೊಟ್ಟ ಮೊದಲ ಜಾನಪದ ಪ್ರಬಂಧವಾಗಿದೆ.

ಜಾನಪದ ಕಲಾವಿದರ ಶೋಷಣೆ, ಸಂಘಟನೆ, ವ್ಯವಹಾರ ಪ್ರಶಸ್ತಿ, ಪುರಸ್ಕಾರಗಳು, ಸಂಘಟನಾಕಾರರ ಮೋಸ, ತಾರತಮ್ಯ ಸಮಾನತೆ ಕುರಿತು ಈ ಲೇಖನದಲ್ಲಿ ಚರ್ಚಿಸಲಾಗಿದೆ. ಪೂರ್ವ ಕಾಲಕ್ಕೂ ಆಧುನಿಕ ಕಾಲಕ್ಕೂ ಇರುವ ಜನಪದರ ಸಂಪ್ರದಾಯವನ್ನು ಈ ಲೇಖನದಲ್ಲಿ ಗುರುತಿಸಲಾಗಿದೆ. ಅಂದಿನ ನಾಟಕದ ಕಥಾವಸ್ತುಗಳು ಪ್ರೇಕ್ಷಕರ ಮನಸ್ಸನ್ನು ಗೆಲ್ಲುವಂತಿದ್ದವು. ಆದರೆ ಆಧುನಿಕ ತಂತ್ರಗಳಿಂದ ನಾಟಕದ ಉಪಕರಣಗಳ ಭಿನ್ನತೆಯನ್ನು ಕುರಿತು ಚರ್ಚಿಸಲಾಗಿದೆ. ಕಳೆದು ಹೋದ ಕಾಲ ಮತ್ತು ಕಳೆಯುತ್ತಿರುವ ಕಾಲದ ವ್ಯವಸ್ಥೆ, ಜಾನಪದರ ವೈಭವ ಕುರಿತು ಚರ್ಚಿಸಲಾಗಿದೆ. ಸೌಹಾರ್ದ ಗುಣವನ್ನು ತಿಳಿಸುವ ಜಾನಪದವು ಇನ್ನೂ ಹೆಚ್ಚಿನ ರೀತಿಯಲ್ಲಿ ಸಂಗ್ರಹವಾಗಬೇಕು. ಏಕೆಂದರೆ ಮನುಷ್ಯನು ಎಷ್ಟೇ ಓದಿಕೊಂಡು, ಇಂಜಿನೀಯರಿಂಗ್ ವೃತ್ತಿಯಲ್ಲಿದ್ದರೂ ಜಾನಪದ ದೈವಕ್ಕೆ ಕೈ ಮುಗಿಯಲೇ ಬೇಕು. ಇದರಿಂದ ಯಾರು ಹೊರತಲ್ಲ, ನಮ್ಮನ್ನು ನಾವೇ ಶೋಷಣೆಗೊಳಪಡಿಸಿಕೊಂಡಿದ್ದೇವೆ. ಯಾವುದೇ ವಿದೇಶಿಯ ವಸ್ತುಗಳಿಗೆ ಮಾರು ಹೋಗದೆ, ದೇಶಿಯ ವಸ್ತು, ಸಂಸ್ಕೃತಿ, ಉಡುಪುಗಳಿಗೆ ಪ್ರೋತ್ಸಾಹ ಕೊಡಬೇಕು. ಹಾಗಾದರೆ ಮಾತ್ರ ಸಂಸ್ಕೃತಿ, ಜಾನಪದ ಕಲಾವಿದರ ವೃತ್ತಿ ಜೀವನವನ್ನು ಸಂರಕ್ಷಿಸಿಕೊಳ್ಳಲು ಸಾಧ್ಯ ಎಂಬ ವೈಜ್ಞಾನಿಕ ಅರಿವನ್ನು ಈ ಲೇಖನದಲ್ಲಿ ತಿಳಿದುಕೊಳ್ಳಲಾಗಿದೆ. ಕೃಷಿ ಕೆಲಸಕಾರರು ಗೊಬ್ಬರ ಹೇರುವಾಗ ಹಾಡುವ ಜಾನಪದ ಜ್ಞಾನವನ್ನು ಕುರಿತು ಚರ್ಚಿಸಲಾಗಿದೆ. ಸಮಾಜದಲ್ಲಿ ನಡೆಯುವ ಪ್ರತಿಯೊಂದು ಘಟನಾವಳಿಗಳೇ ಜಾನಪದ ಕಥಾವಸ್ತುವಾಗಿ ಬದಲಾಗುತ್ತವೆ. ಎಂಬ ಚರ್ಚೆಯನ್ನು ಈ ಲೇಖನದಲ್ಲಿ ವಿವರಿಸಲಾಗಿದೆ.

ಸುಧಾ ಸಂದರ್ಶನಕ್ಕಾಗಿ "ಉತ್ತರ ಮುಖಿಯಲ್ಲಿ ಸಂಗಣ್ಣ" ಎಂಬ ಲೇಖನದಲ್ಲಿ ಮುದೇನೂರು ಸಂಗಣ್ಣನವರ ಮನಸ್ಸಿನ ಭಾವನೆಗಳನ್ನು ಮುಕ್ತವಾಗಿ ಹಂಚಿಕೊಳ್ಳುವ ಚರ್ಚೆ ಇದೆ. ಮನುಷ್ಯನಿಗೆ ಸ್ವಾರ್ಥ ಎಂಬ ಅಹಂಕಾರದ ಗುಣ ಇರಬಾರದು. ಸಮಾಜದ ನಡುವೆ, ಯಾವಾಗಲೂ ಪ್ರೀತಿ ವಿಶ್ವಾಸದಿಂದ ಕೂಡಿರಬೇಕು. ಯಾವುದೇ ಸಂಘರ್ಷಕ್ಕೆ ಆಹ್ವಾನ ಮಾಡಿಕೊಡಬಾರದು. ಸಂತೃಪ್ತಿಯ ಬದುಕಿನಲ್ಲಿ ಸೌಜನ್ಯತೆಯನ್ನು ಉಳಿಸಿಕೊಂಡು ಹೋಗಬೇಕು. ಕೆಲವು ಸಂದರ್ಭದಲ್ಲಿ ಗಂಟುಕಳ್ಳರು ಮುಂಗಡ ಹಣ ಕೇಳಿದಾಗ ಸುಳ್ಳನ್ನು ಹೇಳಬೇಕು. ಮುದೇನೂರು ಸಂಗಣ್ಣನವರ ಕುಟುಂಬವನ್ನು ಜಾತಿ ಭ್ರಷ್ಟತೆಯ ಕಾರಣದಿಂದ ತನ್ನ ಕುಲವು ಏಳು ವರ್ಷಗಳ ಕಾಲ ಬಹಿಷ್ಕರಿಸಿದ ಕಹಿ ಘಟನೆಗಳನ್ನು ಕುರಿತು ಈ ಲೇಖನದಲ್ಲಿ ಚರ್ಚಿಸಲಾಗಿದೆ. ಸಂಗಣ್ಣನವರ ವಿರಾಮದ ಕ್ಷಣಗಳನ್ನು, ಜಾನಪದ ವ್ಯಕ್ತಿಗಳ ಜೊತೆ–ಸಂಗೀತ ಕೇಳುವುದರ ಮೂಲಕ ಕಳೆಯುತ್ತಿರುವ ಸಮಯವನ್ನು ಚರ್ಚಿಸಲಾಗಿದೆ.

ಭ್ರಷ್ಟ ರಾಜಕಾರಣದಿಂದ ದೂರವಿರಬೇಕು. ಇಲ್ಲದಿದ್ದರೆ ಅದು ಮನಸ್ಸನ್ನು ಕುಗ್ಗಿಸುತ್ತದೆ. ಸಮಾಜದ ಒಳಿತೆವಿಗಾಗಿಯೇ ದುಡಿಯಬೇಕು. ಯಾರಿಗೂ ಹೊರೆಯಾಗದೆ ಸದ್ದಿಲ್ಲದೆ, ವಿದಾಯದ ಸಾವನ್ನು ಬಯಸುವ ಸಂಗಣ್ಣನವರ ಮನಸ್ಸಿನ ಭಾವನೆಗಳನ್ನು ಹಂಚಿಕೊಳ್ಳುವ ಚರ್ಚೆ ಈ ಲೇಖನದಲ್ಲಿ ಕಂಡು ಬರುತ್ತದೆ.

ಡಾ. ಸುಜಾತ ಅಕ್ಕಿಯವರು "ವೃದ್ಧಾಪ್ಯ ಒಂದು ಶಾಪ" ಎಂಬ ಬರಹದಲ್ಲಿ, ಮುದೇನೂರು ಸಂಗಣ್ಣನವರ ಜೀವನದಲ್ಲಿ ನಡೆದ ಪ್ರಮುಖ ಘಟನೆಗಳನ್ನು ಕುರಿತು ಚರ್ಚಿಸಲಾಗಿದೆ. ಶಾಲೆಯಲ್ಲಿ ಓದುತ್ತಿರುವಾಗ ಸ್ನೇಹಿತರ ಮಧ್ಯೆ ನಡೆದ ಘಟನೆಯನ್ನು ತಿಳಿಸಲಾಗಿದೆ. ಅದರಿಂದಾದ ಪರಿಣಾಮ ಮತ್ತು ಪೋಲಿಸರ ದಬ್ಬಾಳಿಕೆಯನ್ನು ಚರ್ಚಿಸಲಾಗಿದೆ. ಸಂಗಣ್ಣನವರು ಕರ್ನಾಟಕ ಏಕೀಕರಣದಲ್ಲಿ ಪಾಲ್ಗೊಳ್ಳುವಿಕೆ ಕರ್ನಾಟಕ ಮತ್ತು ಆಂಧ್ರದಲ್ಲಿ ವಿನೋಬಾ ಭಾವೆಯವರ ಸರ್ವೋದಯ ಚಳುವಳಿಯ ಪ್ರಭಾವ. ಸಂಗಣ್ಣನವರ ಆಸಕ್ತಿ ಕ್ಷೇತ್ರ ರಂಗಭೂಮಿಯನ್ನು ಕುರಿತು ಚರ್ಚಿಸಲಾಗಿದೆ. ಜನಪದರ ಸಾಹಿತ್ಯದ ಪ್ರಕಾರಗಳನ್ನು "ಜಾನಪದ ಅಕಾಡೆಮಿ", 'ಯಕ್ಷಗಾನ ಅಕಾಡೆಮಿ'ಗಳೆಂದು ಎರಡು ರೀತಿಯಲ್ಲಿ ಕರೆಯುತ್ತೇವೆ. ಜಾನಪದ ಅಕಾಡೆಮಿ ಎಂದು ಕರೆಯುವುದು ಸೂಕ್ತ ಎಂಬ ಅಭಿಪ್ರಾಯವನ್ನು ಈ ಲೇಖನದಲ್ಲಿ ವ್ಯಕ್ತಪಡಿಸಲಾಗಿದೆ. ಇಂಗ್ಲೀಷ್ ಭಾಷೆಯನ್ನು ಮೂರನೇ ತರಗತಿಯಿಂದ ಕಲಿಸಬೇಕು ಎಂಬ ಶೈಕ್ಷಣಿಕ ಪದ್ಧತಿಯನ್ನು ತಿಳಿಸಲಾಗಿದೆ. ಸಂಗಣ್ಣನವರ ಹೆಚ್ಚು ನಾಟಕಗಳು ಸ್ತ್ರೀಯರ ಬದುಕು ಮತ್ತು ವಚನ ಸಾಹಿತ್ಯದ ಪ್ರಭಾವಕ್ಕೆ ಒಳಗಾದ ಸಂಗತಿಗಳನ್ನು ಕುರಿತು ಈ ಲೇಖನದಲ್ಲಿ ಚರ್ಚಿಸಲಾಗಿದೆ. ಕೊನೆಯ ಸಂಗಣ್ಣನವರ ವೃದ್ಧಾಪ್ಯ ಜೀವನದ ವಿರಾಮ ಕಾಲವನ್ನು ಸಂಗೀತ, ಅನುಭವದ ಓದುವಿನ ಮೂಲಕ ಕೊನೆಯ ದಿನಗಳನ್ನು ಕಳೆದರು. ಇನ್ನೂ ಮುಂತಾದ ವಿಚಾರಗಳನ್ನು ಈ ಲೇಖನದಲ್ಲಿ ತಿಳಿದುಕೊಳ್ಳಲಾಗಿದೆ.

ಮೂರನೆ ಭಾಗ "ನಮನದ"ಲ್ಲಿ ನಾಲ್ಕು ಲೇಖನಗಳಿವೆ. "ಎಂ.ಪಿ. ಪ್ರಕಾಶ್ ಅವರಿಂದ ಹಿಡಿದು ಆನಂದ್ ಋಗ್ವೇದಿ" ವರೆಗಿನ ಕನ್ನಡದ ಮಹತ್ವದ ಲೇಖನಗಳು ಇದರಲ್ಲಿವೆ.

ಎಂ.ಪಿ. ಪ್ರಕಾಶ್ ಅವರು "ಜನಪದ ಜಂಗಮ" ಎಂಬ ಲೇಖನದಲ್ಲಿ ಮುದೇನೂರು ಸಂಗಣ್ಣನವರ ಒಡನಾಟದ ಅನುಭವಗಳನ್ನು ಅಭಿವ್ಯಕ್ತಪಡಿಸಿದ್ದಾರೆ. ಸಂಗಣ್ಣನವರು ವೈದ್ಯಕೀಯ ಕ್ಷೇತ್ರಕ್ಕೆ ಅರ್ಪಿಸಿದ ದೇಹದಾನದ ಬಗ್ಗೆ ಪ್ರಸ್ತಾಪಿಸಲಾಗಿದೆ. ಇಂತಹ ಮಹಾನ್ ವ್ಯಕ್ತಿಯು ಸಾಮಾಜಿಕ ಮೌಢ್ಯತೆಯನ್ನು ತೊಲಗಿಸುವ ವೈಚಾರಿಕ ಪ್ರಜ್ಞೆ ಮೂಡಿಸಿದರು. ಗೊಡ್ಡು ಸಂಪ್ರದಾಯವನ್ನು ಕಿತ್ತಾಕಿದರು. ಜಾತ್ಯಾತೀತಾ ವ್ಯಕ್ತಿಯಾಗಿ ಬೆಳೆದರೂ ಶುಭ ಮುಹೂರ್ತಗಳ ಬಗ್ಗೆ ಪ್ರಶ್ನೆ ಕೇಳುವ, ಹೇಳುವ ವ್ಯಕ್ತಿಗಳನ್ನು ಗೌರವಿಸುತ್ತಿದ್ದರು. ಅವರು ಹೇಳಿದ ವಿಚಾರಗಳ ಬಗ್ಗೆ ನಂಬಿಕೆಯನ್ನು ಇಟ್ಟುಕೊಂಡವರಲ್ಲ. ಒಬ್ಬ ತಂಬಾಕು ವ್ಯಾಪಾರಿಯಾಗಿ ಹಿಂದಿ, ಮರಾಠಿ, ಬಂಗಾಳಿ ಭಾಷೆಗಳನ್ನು ಕಲಿತು ಆ ಭಾಷೆಗಳಲ್ಲಿ ರಚನೆಯಾದ ನಾಟಕ ಕವಿತೆಗಳನ್ನು ಅನುವಾದ ಮಾಡಿದರು. ಇಂತಹ ಪ್ರತಿಭಾವಂತ ಸಂಗಣ್ಣನವರ ಜೊತೆ ಎಂ.ಪಿ. ಪ್ರಕಾಶರು ಸಿನಿಮಾ, ನಾಟಕಗಳ ಕಥಾ ಅನುಭವವನ್ನು ಹಂಚಿಕೊಂಡಿದ್ದಾರೆ. ಹೀಗೆ ಇವರ ಸ್ನೇಹದ ಕುರುವಿಗಾಗಿ ಸಂಗಣ್ಣನವರು 'ಬಾಳ ಭಿಕ್ಷುಕ' ಎಂಬ ನಾಟಕವನ್ನು ಎಂ.ಪಿ. ಪ್ರಕಾಶರಿಗೆ ಅರ್ಪಿಸಿದರು ಎಂಬ ಸಂಗತಿಯನ್ನು ಈ ಲೇಖನದಲ್ಲಿ ತಿಳಿದುಕೊಳ್ಳಲಾಗಿದೆ. ಸಂಗಣ್ಣನವರ ಆದರ್ಶ, ಗುಣ ಸಾಮಾಜಿಕ ಚಿಂತನೆ, ಸ್ತ್ರೀಯರ ಬಗ್ಗೆ ಇರುವ ಗೌರವ, ಪ್ರೀತಿ ವಿಶ್ವಾಸಗಳನ್ನು ಕುರಿತು ವಿವರಿಸಲಾಗಿದೆ.

ವೈದೇಹಿ ಅವರು "ಜಗದ ಸಂಗ ತೊರೆದ ಸಂಗಣ್ಣ" ಎಂಬ ಲೇಖನದಲ್ಲಿ ಮುದೇನೂರು ಸಂಗಣ್ಣನವರು ಪರಿಚಯವಾದ ದಿನದಿಂದ ಹಿಡಿದು ಕೊನೆಯ ದಿನಗಳಲ್ಲಿ ಭೇಟಿಯಾದ, ವಿಶ್ವಾಸ, ಪ್ರೀತಿ, ಸುಖ ದುಃಖಗಳ ವಿಚಾರಗಳನ್ನು ಈ ಲೇಖನದಲ್ಲಿ ತಿಳಿದುಕೊಳ್ಳಲಾಗಿದೆ. ಸಂಗಣ್ಣನವರು ಆಪ್ತರು, ಜೊತೆಗೆ ತಂದೆ ಪ್ರೀತಿಯನ್ನು ಮಕ್ಕಳಿಗೆ ಅಜ್ಜನ ಪ್ರೀತಿಯನ್ನು ಹಂಚಿಕೊಳ್ಳುತ್ತಿದ್ದರು. ಹಾಗೆಯೇ ಮನೆಯಲ್ಲಿ ಮಾಡಿದ ತಿಂಡಿ ತೊಕ್ಕುಗಳನ್ನು ಉಡುಪಿಯ ವೈದೇಹಿಯವರ ಮನೆಗೆ ಸೌಹಾರ್ಧದ ಹರಿಕಾರನಂತೆ ಹೆಗಲ ಮೇಲೆ ಹೊತ್ತು ತರುವ ವಿಚಾರಗಳನ್ನು ಹೇಳಲಾಗಿದೆ.

ಸಂಗಣ್ಣನವರು ಯಾರ ಹಂಗಿಗೂ ಒಳಗಾಗದೆ, ತನ್ನ ತನವನ್ನು, ವ್ಯಕ್ತಿತ್ವ, ಸ್ವಭಾವವನ್ನು ಉಳಿಸಿಕೊಂಡಿದ್ದಾರೆ. ದೀಪಾವಳಿ ಹಬ್ಬ ಬಂದರೆ ಎಲ್ಲರನ್ನು ಹಾರೈಸುವ ಅವ್ವಾ ಹೇಗಿದ್ದಿ, ಮೊಮ್ಮಕ್ಕಳು ಹೇಗಿದ್ದಾರೆ ಎಂದು ಸಂಭೋದಿಸುವ ಪೋಷಕರಂತೆ ಕಾಣುವ ಸಂಗಣ್ಣನವರ ಮಮತೆ, ಮಮಕಾರವನ್ನು ಈ ಲೇಖನದಲ್ಲಿ ವಿವರಿಸಲಾಗಿದೆ. ತಾಯಿಯಂತೆ ಪ್ರೀತಿವುಳ್ಳ ಸಂಗಣ್ಣನವರು ಜಾನಪದ ಸಂಗ್ರಹಕಾರನಾಗಿ, ಭಾಷಾ ಪ್ರೇಮಿಯಾಗಿ ಚಿತ್ರಕಲಾಕಾರನಾಗಿ ಸಾಮಾಜಿಕ ಜೀವಿಯಾಗಿ ಬದುಕಿದರು. ನಾಟಕ, ಕವಿತೆಗಳನ್ನು ರಚಿಸುವಲ್ಲಿ ಯಶಸ್ವಿಯಾದರು.

ಹೊರ ರಾಜ್ಯಗಳಲ್ಲಿ ತಂಬಾಕು ವ್ಯಾಪಾರಿಗನಾಗಿ ನಿಪ್ಪಾಣಿ, ಕೊಲ್ಲಾಪುರ ಕಾಳಹಸ್ತಿ, ಚೆನ್ನೈನಲ್ಲಿ ಸ್ನೇಹಿತರ ವಿಶ್ವಾಸ ಗಳಿಸಿದರು. ನಮ್ಮ ಕರ್ನಾಟಕದ ಉಡುಪಿಯಲ್ಲಿ ಜಾನಪದ ಕೇಂದ್ರ ಹಿತೈಷಿಯಾಗಿ ಕೆಲಸ ಮಾಡಿದರು. ಸಂಗಣ್ಣನವರು ಹೇಳಿದ "ಕಡೆಯ ಸಲ ನಿಮ್ಮಲ್ಲಿಗೆ ಬರುತ್ತಿದ್ದೇನೆ". ಎಂಬ ಮಾತನ್ನು ವೈದೇಹಿಯವರು ಸ್ಮರಿಸುತ್ತಾರೆ. ಕೊನೆಗೆ ಸಂಗಣ್ಣನವರು ನೆಲೆಸಿದ ಭೂಮಿ ಸಮಾಜದಲ್ಲಿ ಬಿಟ್ಟು ಹೋದ ನೆನಪುಗಳನ್ನು ಮಾಡಿಕೊಳ್ಳುತ್ತಾ, ಕಂಬನಿಗೈದಿರುವ ಸಂಗತಿ ವ್ಯಕ್ತವಾಗಿದೆ. ಸಂಗಣ್ಣನವರ

ಸಾವಿನ ದುಃಖವನ್ನು ಸಾಧನೆಗಳನ್ನು, ಸ್ನೇಹಿತರ ಒಡನಾಟ, ಕೊನೆಗೆ ದೇಹವನ್ನು ವೈದ್ಯಕೀಯ ಉಪಯೋಗಕ್ಕೆ ನೆರವಾಗಲೆಂದು ದಾನ ಮಾಡಿದ ವೈಚಾರಿಕತೆಯ ಗುಣವನ್ನು ಈ ಲೇಖನದಲ್ಲಿ ತಿಳಿದುಕೊಳ್ಳಲಾಗಿದೆ.

ಡಾ. ಬಸವರಾಜ ಮಲಶೆಟ್ಟಿಯವರು "ಮುಕ್ತ ಮನಸ್ಸಿನ ಚಿಂತಕ" ಎಂಬ ಲೇಖನದಲ್ಲಿ ಮುದೇನೂರು ಸಂಗಣ್ಣನವರು ಬಾಲ್ಯಾವಸ್ಥೆಯಲ್ಲಿಯೇ ಜ್ಞಾನದ ಹಸಿವನ್ನು ತುಂಬಿಕೊಂಡಿದ್ದರು. ಲೋಹಿಯಾ, ಗಾಂಧಿ, ಬಸವ ಇವರ ತಾತ್ವಿಕ ನಿಲುವುಗಳನ್ನು ಅರಿತು, ಅವರ ಪ್ರಭಾವಕ್ಕೆ ಒಳಗಾಗಿದ್ದರು. ಇದರಿಂದ ಸರಳ ಜೀವಿಯಾಗಿ ಮಾನವೀಯ ಗುಣವನ್ನು ಬೆಳೆಸಿಕೊಂಡಿದ್ದರು. ಸಮಾಜದ ಏಳಿಗೆಗಾಗಿಯೇ ತಮ್ಮನ್ನು ತೊಡಗಿಸಿಕೊಂಡರು. ಯಾರ ಪ್ರಶಸ್ತಿ, ಸನ್ಮಾನಗಳನ್ನು ಬೇಡಿದವರಲ್ಲ. ಆದರೆ ಪ್ರಶಸ್ತಿಗಳು ಬಯಸದೆ ಬಂದಿರುವ ಗೌರವಗಳನ್ನು ಕುರಿತು ಈ ಲೇಖನದಲ್ಲಿ ತಿಳಿಸಲಾಗಿದೆ. ಜಾನಪದ ಸಾಧನೆಯ ಕಡೆಗೆ ಮುಖ ಮಾಡಿರುವ ಸಂಗಣ್ಣನವರು, ಚಿಂತಕರಾಗಿ, ವ್ಯಾಪಾರಿಯಾಗಿ, ಇಹಲೋಕದ ಜೀವನವನ್ನು ಮುಗಿಸಿದರು. ಹೀಗೆ ಸಂಗಣ್ಣನವರು ಚಿಂತನೆಗಳು, ತತ್ವಗಳು, ಆದರ್ಶ ಜೀವನ, ಸರಳ ತಾತ್ವಿಕತೆಯನ್ನು ಈ ಲೇಖನದ ಮೂಲಕ ಅರಿತುಕೊಳ್ಳಲಾಗಿದೆ.

ಆನಂದ್ ಋಗ್ವೇದಿಯವರು 'ಸಂಗಣ್ಣ ಕಣ್ಮುಚ್ಚಿಲ್ಲ' ಎಂಬ ಲೇಖನದಲ್ಲಿ 'ಆ ಅಜ್ಜ ಈ ಮೊಮ್ಮಗ' ಕವಿತೆಯ ತಾತ್ವಿಕತೆಯನ್ನು ಪರಿಚಯಿಸುತ್ತಾ ಸಂಗಣ್ಣನವರ ಸೃಜನಶೀಲ ವ್ಯಕ್ತಿತ್ವವನ್ನು ಪರಿಚಯಿಸುತ್ತಾರೆ. ಮೊಮ್ಮಕ್ಕಳ ಜೊತೆ ಮಮತೆ, ಪ್ರೀತಿಯನ್ನು ಹಂಚಿಕೊಳ್ಳುವ ಸಂಗಣ್ಣನವರ ವಿಶ್ವಾಸನೀಯ ಕಾಳಜಿ ಬಗ್ಗೆ ತಿಳಿಯಲಾಗಿದೆ. ಸಂಗಣ್ಣನವರ ಕೃತಿಗಳು, ಅನುವಾದಗಳು ಜನರ ಮನಸ್ಸನ್ನು ಗೆದ್ದಿವೆ. ಹಲವಾರು ಕೃತಿಗಳನ್ನು ಸಂಗ್ರಹಿಸಿ ಸಂಪಾದಿಸಿದರು. ಸ್ವಾತಂತ್ರ್ಯಕ್ಕಾಗಿ, ದೇಶಿಯತೆ, ಪ್ರಾಂತ ಉಳಿವಿಗಾಗಿ ಕರ್ನಾಟಕ ಏಕೀಕರಣದಲ್ಲಿ ಭಾಗವಹಿಸಿದರು. ಸ್ನೇಹದಕಡಲಿನಲ್ಲಿ ಮುಳುಗಿ ನಿಷ್ಠೂರವಾದಿ ತತ್ವಕ್ಕೆ ಹೆಸರಾಗಿ ಯಾವುದೇ ಸಂಸ್ಥೆಯನ್ನು ಕಟ್ಟದೆ, ತಾವೇ ದೊಡ್ಡ ಸಂಸ್ಥೆ ಎಂಬಂತೆ ಸಂಗಣ್ಣನವರು ಬದುಕಿದರು. ಎಲ್ಲರೊಳಗೆ ತಾನು ಒಬ್ಬರಂತೆ ಬದುಕಿದ ಸಂಗಣ್ಣನವರಿಗೆ "ನಾಡೋಜ ಪದವಿ" ಲಭಿಸಿತು. ದಾವಣಗೇರಿಜಿಲ್ಲೆಯ ಸಾಹಿತ್ಯ ಸಮ್ಮೇಳನದ ಅಧ್ಯಕ್ಷತೆ ವಹಿಸಿಕೊಂಡರು. ಕೊನೆಗೆ ದಾವಣಗೆರೆಯ ಶೈತ್ಯಾಗಾರದಲ್ಲಿಯೆ ತಣ್ಣಗೆ ಮಲಗಿದ್ದರು. ಹಾಗೂ ಸಂಗಣ್ಣನವರ ಕಣ್ಣುಗಳು ಕತ್ತಲೆಯ ಕುರುಡನಿಗೆ ಬೆಳಕಾಗಿ, ಈ ಸಮಾಜವನ್ನು, ಜಗತ್ತನ್ನು ನೋಡುತ್ತಿವೆ. ಸಂಗಣ್ಣನವರ ಮೇಲೆ ಇಟ್ಟಿರುವ, ಪ್ರೀತಿ, ವಿಶ್ವಾಸ ಹಾಗೂ ದುಃಖವನ್ನು ಲೇಖಕ ಈ ಲೇಖನದಲ್ಲಿ ಅಭಿವ್ಯಕ್ತ ಪಡಿಸಿರುವುದನ್ನು ಕಾಣುತ್ತೇವೆ.

ಮುದೇನೂರು ಸಂಗಣ್ಣನವರು ಬದುಕು ಬರಹಗಳು, ಕೃತಿಗಳು, ಸಂಗ್ರಹ, ಸಂಪಾದನೆ, ಕಥೆ, ಕವಿತೆಗಳು ಹಾಗೂ ಜಾನಪದ ನಾಟಕಗಳು ಮುಂತಾದ ವಿಚಾರಗಳನ್ನು ದರ್ಶನ ಹಾಗೂ ನಮನಗಳ ರೂಪದಲ್ಲಿ ಪ್ರಕಟಿಸಿದ್ದಾರೆ. ಪ್ರತಿಯೊಂದು ಲೇಖನಗಳು ತನ್ನದೇ ಆದ ತಾತ್ವಿಕತೆಯನ್ನು ಪಡೆದುಕೊಂಡಿವೆ. ಸಂಗಣ್ಣನವರ ಶೈಕ್ಷಣಿಕ ತುಣುಕುಗಳಿಂದ ಹಿಡಿದು ಕರ್ನಾಟಕದ ಶಿವರಾಮ ಕಾರಂತ, ದ.ರಾ. ಬೇಂದ್ರೆ, ವೈದೇಹಿಯಂತಹ ಸ್ನೇಹಿತರ ಒಡನಾಡಿಯಾಗಿದ್ದರು. ಸಾಮಾನ್ಯಜನರ ಜೀವನದೊಂದಿಗೆ

ಬೆರೆತು ಜಾತ್ಯಾತೀತತೆಯನ್ನು ಬೆಳೆಸಿದರು. ಪ್ರಾಂತಗಳನ್ನು ಒಟ್ಟುಗೂಡಿಸುವಲ್ಲಿ ಕರ್ನಾಟಕ ಏಕೀಕರಣದಲ್ಲಿ ಭಾಗವಹಿಸಿದರು. ವ್ಯಾಪಾರದಿಂದ ದೂರದ ನಿಪ್ಪಾಣಿಯಂತಹ ಸ್ನೇಹಿತರ ಜೊತೆಗೆ ಮರಾಠಿ ಕಲಿತು, ಸಂಗೀತ, ನಾಟಕಗಳನ್ನು ಅವರೊಂದಿಗೆ ನೋಡುತ್ತಿದ್ದರು. ದೊಡ್ಡ ವ್ಯಾಪಾರಿಗನಾಗಿ, ಜಾನಪದ ಕ್ಷೇತ್ರದಲ್ಲಿ ಹೆಸರು ಮಾಡಿದರು. ಜಾನಪದ ತಜ್ಞ ಎನಿಸಿಕೊಂಡರು. ಕೊನೆಗೆ ತನ್ನ ದೇಹವನ್ನು ವೈದ್ಯಕೀಯ ವಿದ್ಯಾರ್ಥಿಗಳಿಗೆ ಉಪಯೋಗವಾಗಲು ದಾನ ಮಾಡಿದರು ಇಂತಹ ವಿಚಾರಗಳನ್ನು ಇಲ್ಲಿನ ಲೇಖನಗಳ ಮೂಲಕ ತಿಳಿದುಕೊಳ್ಳಲಾಗಿದೆ.

ಒಟ್ಟಿನಲ್ಲಿ ಅವರೊಬ್ಬ ಪರಿಪೂರ್ಣ ಮನುಷ್ಯ ಮತ್ತು ಸಂಸ್ಕೃತಿ ಚಿಂತಕರಾಗಿದ್ದರು ಎನ್ನುವುದನ್ನು ಇಲ್ಲಿನ ಎಲ್ಲ ಬರಹಗಳು ಪ್ರಧಾನವಾಗಿ ತೆರೆದು ತೋರುತ್ತವೆ.

## ಅಧ್ಯಾಯ : ಎರಡು

# ಮುದೇನೂರು ಸಂಗಣ್ಣನವರ ಜೀವನ ಮತ್ತು ಸಾಧನೆಗಳು

೨.೧. ಮುದೇನೂರು ಸಂಗಣ್ಣನವರ ಕೃತಿಗಳ ಸಂಕ್ಷಿಪ್ತ ಪರಿಚಯ

೨.೨. ಪ್ರಶಸ್ತಿ ಮತ್ತು ಪುರಸ್ಕಾರಗಳು

## ಅಧ್ಯಾಯ–೨

# ಮುದೇನೂರು ಸಂಗಣ್ಣನವರ ಜೀವನ ಮತ್ತು ಸಾಧನೆಗಳು

ನಮ್ಮ ಕನ್ನಡ ಸಾಹಿತ್ಯದ ಸಾರಸ್ವತ ಲೋಕದಲ್ಲಿ ವಿದ್ವಾಂಸರು, ವಿಮರ್ಶಕರು, ಸಾಹಿತಿಗಳು, ಸಂಪಾದಕರು, ಸಂಗ್ರಹಕಾರರು, ಅನುವಾದಕರು ಇದ್ದಾರೆ. ಕೆಲವರು ಪ್ರತಿಷ್ಠೆ, ಗೌರವ, ಉನ್ನತ ಸ್ಥಾನಮಾನಗಳಲ್ಲಿ ಮೈವೆತ್ತವರು ವೃತ್ತಿಯಲ್ಲಿ ಉಚ್ಚ ಸ್ಥಾನ ಮಾನಗಳಲ್ಲಿದ್ದು, ಪ್ರವೃತ್ತಿಯಲ್ಲಿ ಸಾಹಿತಿಗಳಾಗಿ ಕನ್ನಡ ಸಾಹಿತ್ಯ ಲೋಕಕ್ಕೆ ಅಪಾರವಾದ ಕೊಡುಗೆ ನೀಡಿದ್ದಾರೆ. ಅವರಲ್ಲಿ ಕುವೆಂಪು, ದ.ರಾ.ಬೇಂದ್ರೆ, ಬಿ.ಎಂ.ಶ್ರೀ, ಶಿವರಾಮ ಕಾರಂತರು, ಗದ್ದಿಗಿ ಮಠ, ಜಿ.ಶಂ.ಪರಮಶಿವಯ್ಯ, ಹಾ.ಮಾ.ನಾಯಕ ಮುಂತಾದವರು ಕವಿಗಳಾಗಿ, ವಿಮರ್ಶಕರಾಗಿ, ಸಂಪಾದಕರಾಗಿ, ಕನ್ನಡ ಸಾಹಿತ್ಯ, ಸಂಸ್ಕೃತಿ, ದೇಶಿಯತೆಯನ್ನು ಉನ್ನತ ಮಟ್ಟಕ್ಕೆ ಕೊಂಡೊಯ್ದರು.

ಕೆಲವರು ಉನ್ನತ ಪದವಿ ಗಳಿಸಿ, ಶಿಕ್ಷಣ ಕ್ಷೇತ್ರದಲ್ಲಿ, ಸಮಾಜ ಸೇವ ಕಾರ್ಯಗಳಲ್ಲಿ ಅಧಿಕಾರಿಗಳಾಗಿ ಕಾರ್ಯ ನಿರ್ವಹಿಸುತ್ತಾ, ಸಾಹಿತ್ಯದ ಗೀಳನ್ನು ಹಚ್ಚಿಕೊಂಡು ಹೆಸರನ್ನು ಗಳಿಸಿದ್ದಾರೆ. ಇಂತಹವರು ಒಂದೆರಡು ಕೃತಿ ರಚಿಸಿ ಕೀರ್ತಿ ಸನ್ಮಾನಗಳಿಗಾಗಿ ಕಾದು ಕುಳಿತಿರುವ ಆಧುನಿಕ ಕಾಲದ ವರ್ತಮಾನಕ್ಕೂ ಮತ್ತು ಭೂತ ಕಾಲದ ತುಣುಕನ್ನು ತೆರೆದಿಡುವುದು ಅವಶ್ಯಕವಾದದ್ದು. ಆದರೆ ನವೋದಯ ಕಾಲ ಘಟ್ಟದಲ್ಲಿ ದೇಶಿಯ ಮತ್ತು ರಾಷ್ಟ್ರೀಯ ಪ್ರಜ್ಞೆಯನ್ನು ಜನತೆಗೆ ಎಚ್ಚೆತ್ತುಕೊಳ್ಳುವಂತೆ ಸಾಹಿತ್ಯ ಕಥೆ, ಕವನ, ಕಾದಂಬರಿ ಎಂಬ ಪ್ರಕಾರಗಳಲ್ಲಿ ತಿಳಿಸಿರುವುದು ಗಮನಾರ್ಹ. ಈ ಸಾಹಿತಿಗಳ ಪ್ರೇರೆಪಣೆಯಿಂದ ಲೋಹಿಯಾವಾದ, ಗಾಂಧಿ, ಅರವಿಂದ, ಅಬೇಂಡ್ಕರರ ತತ್ವಗಳಿಗೆ ಮಾರು ಹೋಗಿ ದೇಶಿಯ ಪ್ರಜ್ಞೆ ಜಾತ್ಯಾತೀತವಾಗಿ ಬೆಳೆದವರಲ್ಲಿ ಮುದೇನೂರು ಸಂಗಣ್ಣನವರು ಒಬ್ಬರು.

ಅವರು ಯಾವುದೇ ಪದವಿ ಪಡೆದವರಲ್ಲ. ಆಸೆ, ಆಕಾಂಕ್ಷೆಗಳಿಗೆ ಮನುಷ್ಯತ್ವವನ್ನು ಬಲಿ ಕೊಟ್ಟವರಲ್ಲ. ಗ್ರಾಮೀಣ ಪ್ರದೇಶದ ಸಾತ್ವಿಕ ಮನಸ್ಸಿನ ಮುಗ್ಧ ಜೀವಿ. ವೃತ್ತಿಯಲ್ಲಿ ತಂಬಾಕು ವ್ಯಾಪಾರಿಯಾಗಿ ಪ್ರವೃತ್ತಿಯಲ್ಲಿ ಜಾನಪದ ಸಂಗ್ರಹಕಾರರಾಗಿ, ಜನಪದ ನಾಟಕಗಳನ್ನು ರಚಿಸಿದರು. ಯಾವುದೇ ಪ್ರಶಸ್ತಿ ಪುರಸ್ಕಾರಗಳಿಗೆ ಕೈಯೊಡ್ಡಿದವರಲ್ಲ. ಬಂದ ಪ್ರಶಸ್ತಿಗಳನ್ನು ಸೌಜನ್ಯದಿಂದ ಸ್ವೀಕರಿಸಿದರು. ಸಮಾಜ, ರಾಜ್ಯ, ದೇಶದ ಹಿತಕ್ಕಾಗಿ ಏಕೀಕರಣ ಚಳುವಳಿಯಲ್ಲಿ ಭಾಗವಹಿಸಿದರು. ಇಂತಹ ಗ್ರಾಮೀಣ ಪ್ರತಿಭೆಯ ಜೀವನ ಮತ್ತು ಸಾಧನೆಗಳನ್ನು ಸಂಕ್ಷಿಪ್ತವಾಗಿ ಪರಿಚಯಿಸುವುದು ಇಲ್ಲಿ ತುಂಬಾ ಅಗತ್ಯವಾಗಿದೆ.

**ಜೀವನ:** ಮುದೇನೂರು ಸಂಗಣ್ಣನವರು ಮೊದಲು ಬಳ್ಳಾರಿ ಜಿಲ್ಲೆಗೆ ಸೇರಿದ್ದ ಇಂದು ದಾವಣಗೆರೆ ಜಿಲ್ಲೆಗೆ ಸೇರಿದ ಹರಪನಹಳ್ಳಿ ತಾಲ್ಲೂಕಿನ, ಚಿಗಟೇರಿ ಗ್ರಾಮದಲ್ಲಿ ೧೭ನೇ ಮಾರ್ಚ್ ೧೯೨೭ರಲ್ಲಿ ಜನಿಸಿದರು. ತಂದೆ ಕೊಟ್ರಬಸಪ್ಪ, ತಾಯಿ ಸಿದ್ಧಮ್ಮ ದಂಪತಿಗಳ ನಾಲ್ಕು ಜನ ಮಕ್ಕಳಲ್ಲಿ. ಜೇಷ್ಠ ಸುಪುತ್ರನಾಗಿ ಮುದೇನೂರು ಸಂಗಣ್ಣ ಜನಿಸಿದರು, ಎರಡನೆಯವನು ವಿರೂಪಾಕ್ಷಪ್ಪ, ಹೆಣ್ಣುಮಕ್ಕಳಲ್ಲಿ ಮೂರನೆಯವಳು ಚಂದ್ರಮ್ಮ ಮತ್ತು ಕೊನೆಯವಳು ರಾಜೇಶ್ವರಿ.

ಪೂರ್ವಿಕರ ಕುಟುಂಬದಿಂದಲೂ ಮುದೇನೂರು ಸಂಗಣ್ಣನವರ ಕುಟುಂಬ ತುಂಬ ಪ್ರಸಿದ್ಧಿ ಪಡೆದುಕೊಂಡಿತ್ತು. ತಂದೆ, ತಾತನ ಕಾಲದಿಂದಲೂ, ಈ ಕುಟುಂಬವು. ಸಮಾಜ ಸೇವಾ ಕಾರ್ಯಗಳು, ರಾಜಕೀಯ ಒಡನಾಟ, ದಾನ ದತ್ತಿಗಳು, ಸ್ವಾತಂತ್ರ್ಯ ಹೋರಾಟ, ಏಕೀಕರಣ ಚಳುವಳಿಯಲ್ಲಿ ದುಮಿಕಿದವರು. ಹೆಣ್ಣು ಗಂಡು ಎನ್ನದೆ ಎಲ್ಲರಿಗೂ ಸಮಾನತೆಯ ಶಿಕ್ಷಣ ನೀಡಿದರು. ಮುದೇನೂರು ಸಂಗಣ್ಣನವರು "ಇಂಟರ್ ಮೀಡಿಯೆಟ್‌ವರೆಗೆ ಓದಿಕೊಂಡಿದ್ದರು. ಈ ಕುಟುಂಬದ ಪ್ರಮುಖ ವೃತ್ತಿ 'ಕೃಷಿ ಮತ್ತು ವ್ಯಾಪಾರ' ಭೂ ಒಡೆತನದ ಸಿರಿಯು ಮುದೇನೂರು ಸಂಗಣ್ಣನವರ ಪೂರ್ವಿಕರ ಪ್ರತಿ ಫಲದಿಂದ ಬಂದಿತ್ತು. ಮುದೇನೂರು ಸಂಗಣ್ಣನವರ ಕುಟುಂಬವು ಸುಮಾರು ನಾಲ್ಕುನೂರು ವರ್ಷಗಳ ಹಿಂದೆಯೇ ಚಿಗಟೇರಿ ಗ್ರಾಮದಲ್ಲಿ ಬಂದು ನೆಲೆಸಿತ್ತು. ಜೀವಿಸುವುದಕ್ಕಾಗಿ, ಪಾಳುಬಿದ್ದಿರುವ ಫಲವತ್ತಾದ ಭೂಮಿಯನ್ನು ಕಂಡು, ಹದ ಮಾಡಿ, ಹೊಗೆ ಸೊಪ್ಪು, ಸೇಂಗ, ಕಡಲೆಯನ್ನು ಬೆಳೆದರು. ಸಾತ್ವಿಕತನದಿಂದ, ರೈತರ ಒಡನಾಟದಲ್ಲಿ ಭೂ ಹಿಡುವಳಿದಾರರಾಗಿ ಬದುಕಿದರು. ರೈತರಿಗೆ ಸಾಲ ಕೊಡುವಷ್ಟರ ಮಟ್ಟಿಗೆ ಶ್ರೀಮಂತಿಕೆ ಬಂದಿತು. ಪ್ರೀತಿ, ವಿಶ್ವಾಸ, ಸಹಬಾಳ್ವೆ, ಸಹಕಾರ ಇದ್ದ ಕಾರಣದಿಂದ ರೈತರು ತಮ್ಮ ಜೀವನೋಪಾಯಕ್ಕಾಗಿ ಹಣವನ್ನು ಸಾಲವಾಗಿ ಪಡೆದಿದ್ದರು. ಸಾಲದ ಹಣವನ್ನು ವಾಪಾಸ್ಸು ಕೊಡಲಾಗದೆ, ರೈತರು ಭೂಮಿಯನ್ನೇ ಕೊಟ್ಟರು. ಅದರಿಂದ ಈ ಕುಟುಂಬವು "ಏಳುನೂರು ಏಕರೆಯ ಭೂ ಮಾಲೀಕ"ರೆಂದು ಹೆಸರು ಪಡೆದರು.

ಈ ಭೂ ಮಾಲಿಕ ತನವು ತಾತ ಸಂಗಣ್ಣ, ಅಜ್ಜಿ ಚನ್ನಬಸಮ್ಮ ಇವರಿಬ್ಬರ ಮಗನಾದ ಕೊಟ್ರಬಸಪ್ಪನಿಗೆ ವಂಶ ಪರಂಪರಾನುಗತವಾಗಿ ಬಂದಿತ್ತು. ಸಹಾಯ, ಸಹಕಾರ, ದಾನ ಧರ್ಮದ ಹಾದಿಯಲ್ಲಿಯೇ ಬೆಳೆದು ಬಂದಿತು. ಆ ಆಸ್ತಿಯ ಸವಿಯನ್ನುಂಡವರೆಂದರೆ ಕೊಟ್ರ ಬಸಪ್ಪನವರು. ರಾಜ ಮಹಾರಾಜರಂತೆ ಹಳ್ಳಿ-ಹಳ್ಳಿಗೂ ಕುದುರೆಯ ಮೇಲೆ ಸವಾರಿ ಮಾಡುತ್ತಿದ್ದರು. ಜನರ ಸುಖ-ದುಃಖಗಳನ್ನು ಕೇಳುತ್ತಾ ಸಮಾಜ ಸೇವೆ ಮಾಡುತ್ತಿದ್ದರು. ರಾಜಕಾರಣಿಗಳ ಒಡನಾಟವಿತ್ತು. ಜೊತೆಗೆ ಲೋಯರ್ ಸೆಕೆಂಡರಿ ಶಿಕ್ಷಣ ಪಡೆದ ಜ್ಞಾನದ ಅರಿವು ಇತ್ತು. ಇವುಗಳ ಅರಿವು ಇದ್ದ ಕೊಟ್ರ ಬಸಪ್ಪನವರು ಜೀವನದ ಸಂಗಾತಿಯಾಗಿ ಹಗರಿ ಬೊಮ್ಮನ ಹಳ್ಳಿಯ ಶ್ರೀಮಂತ ಯುವತಿ ಸಿದ್ಧಮ್ಮನನ್ನು ಮದುವೆಯಾದರು. ಸದಾ ತಾತ್ವಿಕತೆ, ಸಮಾಜಿಕ ಸೇವೆ, ಸಹಕಾರ, ಸಮಾನತೆ, ಸ್ತ್ರೀ ಸಮಾನತೆ, ಶಿಕ್ಷಣ ಮುಂತಾದ ತತ್ವಗಳನ್ನು ಈ ಕುಟುಂಬವು ಪಾಲಿಸುತ್ತಿತ್ತು. ನಾಗರೀಕತೆ ಅರಿವು, ಪ್ರಜ್ಞೆ, ಜ್ಞಾನದ ತಿಳುವಳಿಕೆ ಇತ್ತು. ಸ್ವಾತಂತ್ರ್ಯ ಪೂರ್ವದ ಸಂದರ್ಭದಲ್ಲಿ, ಸ್ತ್ರೀಯರು ಹೊರಗೆ ಹೋಗದ ಪುರುಷ ಪ್ರಧಾನ ವ್ಯವಸ್ಥೆಯಲ್ಲಿ ಕೊಟ್ರಬಸಪ್ಪನವರು ಹೆಣ್ಣು ಮಕ್ಕಳಿಗೆ ಲೋಯೆರ್ ಸೆಕೆಂಡರಿಯವರೆಗೆ ವಿದ್ಯಾಭ್ಯಾಸ ಮಾಡಿಸಿದ್ದರು.

ಸಾತ್ವಿಕತೆ, ಸಹಾನುಭೂತಿ, ವೈಚಾರಿಕತೆ, ಸ್ತ್ರೀ ಸಮಾನತೆ, ಸಾಂಸ್ಕೃತಿಕ, ಸಾಮಾಜಿಕ ಚಟುವಟಿಕೆಗಳಲ್ಲಿ ಈ ಕುಟುಂಬವು ತೊಡಗಿಸಿಕೊಂಡಿತ್ತು. ಇಂತಹ ಕುಟುಂಬದಲ್ಲಿ ಹುಟ್ಟಿದ ಮುದೇನೂರು ಸಂಗಣ್ಣನವರು, ಇಂಟರ್ ಮೀಡಿಯೆಟ್‌ವರೆಗೆ ಓದಿ, ಕೃಷಿಕನಾಗಿ, ಏಳುನೂರು ಎಕರೆಗೆ ಭೂ ಒಡೆಯನಾಗಿ, ನಂತರ ಹೊಗೆ ಸೊಪ್ಪಿನ ವ್ಯಾಪಾರಿಯಾಗಿ ಆಂಧ್ರ, ಮಹಾರಾಷ್ಟ್ರ, ಹೈದರಾಬಾದ್ ರಾಜ್ಯಗಳಲ್ಲಿ ತಂಬಾಕು ವ್ಯಾಪಾರ ಮಾರಾಟದ ವಹಿವಾಟನ್ನು ಇಟ್ಟುಕೊಂಡಿರುವುದು ಅಪೂರ್ವದ ಸಂಗತಿ.

**ಪ್ರಾಥಮಿಕ ಮತ್ತು ಪ್ರೌಢಶಿಕ್ಷಣ:** ಪ್ರಾಥಮಿಕ ಶಾಲಾ ಹಂತದಲ್ಲಿ ಏಕಾಂಗಿಯಾಗಿ ಒಂಟಿತನದ ಜೀವನ ಅನುಭವಿಸಿದರು. ಸದಾ ಓದುವ ಹವ್ಯಾಸ ಇಟ್ಟುಕೊಂಡಿದ್ದರು. ಯಾರೊಂದಿಗೂ ಸಂಪರ್ಕವನ್ನು ಬೆಳೆಸಿಕೊಳ್ಳಲಿಲ್ಲ. ಇವರ ಮೌನ, ಏಕಾಂಗಿತನವೆ ಮುಂದಿನ ಭವಿಷ್ಯದ ಸಾಧನೆಗೆ ಕಾರಣವಾಯಿತು. ಬಾವಿಯೊಳಗಿನ ಕಪ್ಪೆಯಂತೆ, ಶಾಲೆ ಮತ್ತು ಮನೆಯನ್ನು ದೈನಂದಿನ ಚಟುವಟಿಕೆಗಳಾಗಿ ಆಶ್ರಯಿಸಿದ್ದರು. ಪ್ರಾಥಮಿಕ ಶಿಕ್ಷಣದ ಹಂತದಲ್ಲಿ ಸಾಂಸ್ಕೃತಿಕ ಕಾರ್ಯಕ್ರಮಗಳಲ್ಲಿ, ಸೃಜನಶೀಲ ಚಟುವಟಿಕೆಗಳಲ್ಲಿ ತೊಡಗಿಸಿಕೊಂಡವರಲ್ಲ. ಯಾರಿಂದಲೂ ಸಹಾಯದ ಅಪೇಕ್ಷೆ ಬೇಡಿದವರಲ್ಲ. ತನ್ನಿಂದ ಯಾರಿಗೂ ನೋವಾಗದ ರೀತಿಯಲ್ಲಿ ಬದುಕಿದರು. ಹೀಗೆ ಒಂದರಿಂದ ನಾಲ್ಕನೆ ವರ್ಗದ ವರೆಗೆ ಚಿಗಟೇರಿಯಲ್ಲಿಯೇ ಪ್ರಾಥಮಿಕ ಶಾಲಾ ಜೀವನ ಮುಗಿಸಿದರು.

ಮುಂದಿನ ವಿದ್ಯಾಭ್ಯಾಸಕ್ಕಾಗಿ ಹರಪನಹಳ್ಳಿಯ ಸರ್ಕಾರಿ ಶಾಲೆಗೆ ಸೇರಿದರು. ಅಲ್ಲಿಯು ಸ್ನೇಹಿತರ, ಶಿಕ್ಷಕರ ಒಡನಾಟ ಇಟ್ಟುಕೊಳ್ಳದೇ ಓದುವುದೇ ತನ್ನ ಜೀವನದ ಗುರಿಯೆಂಬಂತೆ, ಹೆಚ್ಚು ಹೆಚ್ಚು ತಿಳಿದುಕೊಳ್ಳುವ ಓದುವ ಆಸಕ್ತಿ ಬೆಳೆಯಿತು. ಮುಂದೆ 'ಓದು' ಎನ್ನುವ ಆಸಕ್ತಿಯ ಕೇಂದ್ರ ಬಿಂದು, ಜೀವನದ ಬದಲಾವಣೆಗೆ ಕಾರಣವಾಗುತ್ತದೆ. ಭಾರತಕ್ಕೆ ಸ್ವಾತಂತ್ರ್ಯ ಹೋರಾಟದ ಕಾಲದಲ್ಲಿ ಮುದೇನೂರು ಸಂಗಣ್ಣನವರ ಕಿವಿಗಳಿಗೆ ಸ್ವಾತಂತ್ರದ ಘೋಷಣೆಗಳು, ಚಳುವಳಿಯ ವಿಚಾರಗಳು, ಸಾಮಾಜಿಕ ವ್ಯವಸ್ಥೆ, ಬ್ರಿಟಿಷರ ದಬ್ಬಾಳಿಕೆ. ಇವುಗಳನ್ನು ಕಂಡು ಸ್ವಾತಂತ್ರ್ಯ ಚಳುವಳಿಯ ಅಖಾಡಕ್ಕೆ ಧುಮುಕುತ್ತಾರೆ.

ಕರ್ನಾಟಕ ಏಕೀಕರಣ ಚಳುವಳಿಯನ್ನು ಕುರಿತು ಎಲ್ಲಾದರೂ, ಭಾಷಣ, ಉಪನ್ಯಾಸ ಕಾರ್ಯಕ್ರಮಗಳನ್ನು ಏರ್ಪಡಿಸಿದರೆ, ಅಲ್ಲಿಗೆ ಹೋಗಿ ಕೇಳುವ ಪದ್ಧತಿಯನ್ನು ಇಟ್ಟುಕೊಂಡಿದ್ದರು. ಆ ಭಾಷಣದ ವಿಚಾರಗಳನ್ನು ಗ್ರಹಿಸುವ, ಚಿಂತಿಸುವ ಗುಣವನ್ನು, ಮುದೇನೂರು ಸಂಗಣ್ಣನವರು ಎಳೆಯವಯಸ್ಸಿನಲ್ಲಿಯೇ ರೂಢಿಸಿಕೊಂಡಿದ್ದರು.

ಕರ್ನಾಟಕ ಏಕೀಕರಣ ಚಳುವಳಿಯತ್ತ ಗಮನಹರಿಸಲು ಮತ್ತೊಂದು ಕಾರಣವನ್ನು ಕೊಡಲಾಗಿದೆ. ಹಿರಿಯ ಪ್ರಾಥಮಿಕ ಶಾಲಾ ಹಂತದಲ್ಲಿ ಓದುತ್ತಿರುವಾಗ ಕಂಡ ಸಮಸ್ಯೆಗಳು, ಪತ್ರಿಕೆಗಳಲ್ಲಿ ಬರುವ ಏಕೀಕರಣದ ಘಟನಾವಳಿಗಳು. ಮುಂತಾದ ವಿಚಾರಗಳನ್ನು ವಿದ್ವಾಂಸರು, ಕವಿಗಳು ಶಾಲೆಗಳಲ್ಲಿ, ಸಾರ್ವಜನಿಕ ಸಮುದಾಯಗಳಲ್ಲಿ ಭಾಷಣ, ಚರ್ಚೆಯ ಮೂಲಕ ಅರಿವನ್ನುಂಟು ಮಾಡುತ್ತಿದ್ದರು. ಮುದೇನೂರು ಸಂಗಣ್ಣನವರು "ಇಂಟರ್ ಮೀಡಿಯೆಟ್ ವಿದ್ಯಾಭ್ಯಾಸದ ಅವಧಿಯಲ್ಲಿಯೇ ಮಾಸ್ತಿ ವೆಂಕಟೇಶ ಅಯ್ಯಂಗಾರ, ಅ.ನ.ಕೃಷ್ಣರಾವ್, ನಿರಂಜನ, ಬೆನಗಲ್ ರಾಮರಾವ್, ದ.ರಾ.ಬೇಂದ್ರೆ

ಮೊದಲಾದ ಕವಿಗಳು ಏಕೀಕರಣ ಹೋರಾಟಗಾರರನ್ನು ಹತ್ತಿರದಿಂದ ನೋಡಿದ್ದರು."[೨] ಏಕೀಕರಣ ಹೋರಾಟಗಾರರ ವೈಚಾರಿಕ ನಿಲುವು, ಸಂಸ್ಕೃತಿ, ದೇಶದ ಹಿತ, ನೆಲ, ಜಲ, ಪ್ರಾಂತ, ಪ್ರದೇಶಗಳ ಉಳಿವು, ಶೋಷಣೆಯ ವಿರುದ್ಧ ಸಿಡಿದೇಳುವ ಕ್ರಾಂತಿಕಾರಿ ನಿಲುವುಗಳನ್ನು ಕುರಿತು ಭಾಷಣಗಳಲ್ಲಿ ಮಂಡಿಸುತ್ತಿದ್ದರು. ಸ್ವಾತಂತ್ರ್ಯದ ಜಾಗೃತಿ ಮೂಡಿಸಲು ಸಾರ್ವಜನಿಕ ವೇದಿಕೆಗಳನ್ನು ಹಮ್ಮಿಕೊಳ್ಳುತ್ತಿದ್ದರು. ಕರ್ನಾಟಕ ಏಕೀಕರಣದ ಪರಿಕಲ್ಪನೆ ಅರಿತ ಸಂಗಣ್ಣನವರು ಪ್ರೌಢಶಾಲಾ ಹಂತದಲ್ಲಿ ಭಾಷಣ ಸ್ಪರ್ಧೆಗೆ ಇಳಿಯುವಂತೆ ಪ್ರೇರೇಪಿಸಿದವು. ಪ್ರಚೋದನೆಯನ್ನು ನೀಡಿದವು. ಮೊದಲಿನಿಂದಲೂ, ತಾಳ್ಮೆ, ಸಹಕಾರ, ಸಂಯಮ, ಸಂಕೋಚ ಮನೋಭಾವನೆಯ ಪ್ರವೃತ್ತಿಯನ್ನು ಕಂಡ ಶಿಕ್ಷಕರು ಮುದೇನೂರು ಸಂಗಣ್ಣನನ್ನು ಕುರಿತು ಹೀಗೆ ಹೇಳುತ್ತಾರೆ. "ಇವನು ಚೆನ್ನಾಗಿ ಓದುತ್ತಾನೆ. ಕಲಿಯುವ ಆಸಕ್ತಿ ಇದೆ. ಆದರೆ ಇವನೊಬ್ಬ ಮೌನಿ ಎಂಬ ಭಾವನೆ ವ್ಯಕ್ತಪಡಿಸಿದ್ದರು. ಈ ಶಾಲಾ ಜೀವನದಲ್ಲಿ ವಾರಿಗೆಯ ಸ್ನೇಹಿತರೊಂದಿಗೆ ದೇಶಿಯ ಆಟಗಳಾದ ಕಬ್ಬಡ್ಡಿ, ಖೋ,ಖೋ, ಚಿನ್ನಿದಾಂಡು, ಚಂಡಾಟವನ್ನು ಆಡುತ್ತಿದ್ದರು. ಆ ಆಟಗಳಲ್ಲಿ ಆಸಕ್ತಿ ಇಲ್ಲದೆ. ಅವರೊಂದಿಗೆ ಬೇರೆಯದೆ. ಓದುವ ಆಸಕ್ತಿಯಿಂದ ಪುಸ್ತಕದ ಹಾಳೆಗಳನ್ನು ತಿರಿವಿ ಹಾಕುತ್ತಿದ್ದರು. ಶಾಲೆಗೆ ಬರುವಾಗ ತಿಂಡಿ ತಿನಿಸುಗಳನ್ನು ತರುತ್ತಿದ್ದರು. ಧಾರಾಳವಾಗಿ ಹಣವನ್ನು ಖರ್ಚು ಮಾಡುತ್ತಿದ್ದರು. ಇದನ್ನರಿತ ಇಬ್ಬರು ಸ್ನೇಹಿತರು ಇವನ ಒಡನಾಟ ಇಟ್ಟುಕೊಂಡಿದ್ದರು. ಆಗ ಒಂಭತ್ತನೆಯ ತರಗತಿಯಲ್ಲಿ ಓದುತ್ತಿದ್ದರು. ಸುವರ್ಣ ಅವಕಾಶವೆಂಬಂತೆ ಶಾಲಾ ವಾರ್ಷಿಕೋತ್ಸವದ ಸಿದ್ಧತೆ ನಡೆಯುತ್ತಿತ್ತು. ಆ ಕಾರ್ಯಕ್ರಮಕ್ಕೆ ವಿವಿಧ ಸ್ಪರ್ಧೆಗಳನ್ನು ಏರ್ಪಡಿಸಿದ್ದರು. ಅದರಲ್ಲಿ ಭಾಷಣ ಸ್ಪರ್ಧೆಯು ಒಂದಾಗಿತ್ತು. ಮುದೇನೂರು ಸಂಗಣ್ಣನವರ ಭಾಷಣ ಕಲೆಯ ಪ್ರತಿಭೆಯನ್ನು ಸ್ನೇಹಿತರು ಗುರುತಿಸಿ ಭಾಷಣ ಸ್ಪರ್ಧೆಗೆ ಹೆಸರು ಕೊಡುವಂತೆ ಪ್ರಚೋಧಿಸಿದರು. ಆದರೆ ಎಂದು ತನ್ನ ಒಳಗಿನ ಜ್ಞಾನದ ಬುತ್ತಿಯನ್ನು ಹೊರ ಹಾಕಿದವನಲ್ಲ. ಸ್ನೇಹಿತರ ಒತ್ತಾಯದ ಮೇರೆಗೆ, ಭಾಷಣದ ಸ್ಪರ್ಧೆಗೆ ಹೆಸರು ನೋಂದಾಯಿಸಲು ಅಧ್ಯಾಪಕರ ಸಮೀಪಕ್ಕೆ ಹೋಗಿ "ನಾನು ಭಾಷಣ ಸ್ಪರ್ಧೆಯಲ್ಲಿ ಭಾಗವಹಿಸುತ್ತೇನೆ. ನನ್ನ ಹೆಸರನ್ನು ಬರೆದುಕೊಳ್ಳಿ ಎಂದಾಗ, ಅದಕ್ಕೆ ಅಧ್ಯಾಪಕರ ಪ್ರತ್ಯುತ್ತರ ಕುತೂಹಲ ಮತ್ತು ವ್ಯಂಗ್ಯವಾಗಿ ಪ್ರತಿಕ್ರಿಯಿಸುತ್ತಾ" ಮೌನದ ಮುದ್ದೇಯಾದ ನೀನು ಭಾಷಣ ಮಾಡುತ್ತೀಯ ಆಯಿತು ಕರ್ನಾಟಕ ಏಕೀಕರಣ ಕುರಿತು ಮಾತನಾಡು ನೋಡುವ"[೨] ಎಂದು ಅಧ್ಯಾಪಕರು ಸವಾಲು ಹಾಕುತ್ತಾರೆ.

ಸ್ನೇಹಿತರ ಒತ್ತಾಸೆ, ಗುರುಗಳ ವ್ಯಂಗ್ಯ ಟೀಕೆಗೆ ಕುಗ್ಗದೆ, ಭಾಷಣ ಸ್ಪರ್ಧೆಗೆ ತಯಾರಿ ನಡೆಸಿದರು. ಇಡೀ ಶಾಲೆಯು ಜ್ಯೋತಿಯ ಬೆಳಕಿನಂತೆ ಪ್ರಜ್ವಲಿಸುತ್ತದೆ. ವಾರ್ಷಿಕೋತ್ಸವದ ಸಮಾರಂಭವು ನಾಡ ಹಬ್ಬದಂತೆ ಆಚರಿಸುತ್ತಿದೆ. ಎಲ್ಲಿ ಅಂದರಲ್ಲಿ ಮಾವಿನ ತೋರಣಗಳಿಂದ ರಾರಾಜಿಸುತ್ತಿದೆ. ಸಂಗಣ್ಣನವರ ಭಾಷಣದ ಸರಧಿಯು ಬಂದಿದೆ. ಪ್ರತಿಭಾ ಕಾರಂಜಿಯನ್ನು ತೋರಿಸುವ ಸಂಭ್ರಮದ ದಿನವು ಹೌದು, ತನ್ನಲ್ಲಿ ಭಾಷಣ ಮಾಡುವ ಕಲೆ ಹಾಗೂ ಮೌನದ ಮುದ್ದೆ ಅಲ್ಲಾ, ಸೃಜನ ಶೀಲ ವಿದ್ಯಾರ್ಥಿ ಎನಿಸಿಕೊಳ್ಳುವ ಅವಕಾಶವು ಹೌದು.

ವಾರ್ಷಿಕೋತ್ಸವದ ಸಮಾರಂಭದಲ್ಲಿ ಮುದೇನೂರು ಸಂಗಣ್ಣನವರು, ಕನ್ನಡ ನಾಡು, ನುಡಿ, ನೆಲ, ಸಂಸ್ಕೃತಿ, ಸಾಹಿತ್ಯ ಪರಂಪರೆ, ಕರ್ನಾಟಕದ ಏಕೀಕರಣದ ಸಾಧ್ಯತೆಗಳನ್ನು ಸ್ಪಷ್ಟ ಮಾಹಿತಿಯೊಂದಿಗೆ, ಅಧಿಕೃತವಾಗಿ ಮಾತನಾಡಿದರು. ಈ ಭಾಷಣ ಸ್ಪರ್ಧೆಯಲ್ಲಿ ಪ್ರಥಮ ಬಹುಮಾನ ಬಂದಿತು. ಶಿಕ್ಷಕರಿಂದ ಪ್ರೋತ್ಸಾಹ, ಮತ್ತು ಇಡೀ ಶಾಲೆಯೇ ಈತನನ್ನು ಕೊಂಡಾಡಿತು. ಈ ಹುಡುಗನ ಅಪಾರ ಸಾಮರ್ಥ್ಯವನ್ನು ಕಂಡು, ಬೆರಗಾಗಿ, ಕುತೂಹಲ, ಸಂತೋಷವನ್ನು ತಾಳಲಾರದೆ, ಗುರುಗಳಾದ ಆನಂದರಾಯರು, ವರ್ಗ ಕೋಣೆಯಲ್ಲಿ, ವಿದ್ಯಾರ್ಥಿಗಳೊಂದಿಗೆ, ಏಕೀಕರಣದ ಚಮತ್ಕಾರ, ಭಾಷಣದ ವೈಶಿಷ್ಠತೆ, ಕನ್ನಡ ಕವಿಗಳ ಕವನಗಳ ಉದ್ಗಾರ, ವಿದ್ವಾಂಸರ ಅಭಿಪ್ರಾಯಗಳು, ಏಕೀಕರಣ ಚಳವಳಿ ನಾಯಕರ ಹೇಳಿಕೆಗಳನ್ನು ಉದಾಹರಣೆ ಸಹಿತ ಹೇಗೆ ಮಾತನಾಡಿದನು ಎಂಬುದನ್ನು ವರ್ಣಿಸಿದರು.

ಏಕೀಕರಣ ಭಾಷಣವು ಇಷ್ಟೊಂದು ಪರಿಣಾಮಕಾರಿಯಾಗಿ ವಿದ್ಯಾರ್ಥಿಗಳ, ಶಿಕ್ಷಕರ ಮನ ಮುಟ್ಟಬೇಕಾದರೆ ಆ ಹುಡುಗನಲ್ಲಿರುವ ರಾಷ್ಟ್ರೀಯ ಐಕ್ಯತಾ ಮನೋಭಾವನೆ ಓದುವ ಹವ್ಯಾಸ ನಾಗರೀಕ ಪ್ರಜ್ಞೆಯ ಅರಿವನ್ನು ತಿಳಿಸಿಕೊಡುತ್ತದೆ. ಆದರೆ ಇಷ್ಟೆಲ್ಲಾ ಅರಿತ್ತಿದ್ದರು ನಮ್ಮ ಭಾರತ ದೇಶಕ್ಕೆ ಸ್ವಾತಂತ್ರ್ಯ ಆ ವೇಳೆಗೆ ಬಂದಿಲ್ಲ ಎಂಬ ಆತಂಕವು ಇತ್ತು. ತದ ನಂತರದಲ್ಲಿ ಬ್ರಿಟೀಷರ ಆಡಳಿತ ದೌರ್ಜನ್ಯ. ಮಲತಾಯಿ ಧೋರಣೆ, ಸ್ವಾತಂತ್ರದ ಕೂಗು, ಭಾರತ ದೇಶದ ಜನರ ಆಕ್ರಂಧನ ಮುಗಿಲು ಮುಟ್ಟಿತ್ತು. 'ಬ್ರಿಟೀಷರೆ ದೇಶಬಿಟ್ಟು ತೊಲಗಿ, ಭಾರತಕ್ಕೆ ಸ್ವಾತಂತ್ರ್ಯವನ್ನು ಕೊಡಿ' ಎಂಬ ಘೋಷಣೆಗಳನ್ನು ಕೂಗುತ್ತಿದ್ದರು. 'ಸ್ವಾತಂತ್ರ್ಯ' ಎಂಬ ಮಂತ್ರವು ಭಾರತ ದೇಶದ ತುಂಬಾ ಹರಡಿತ್ತು. ಮಿಂಚಿನೋಪಾದಿಯಲ್ಲಿ ಜನರನ್ನು ಬಡಿದೆಬ್ಬಿಸಿತು. ನಮ್ಮ ಕನ್ನಡ ನಾಡು, ನೆಲ, ಭಾಷೆ ಪ್ರದೇಶಗಳು ಬ್ರಿಟೀಷ ಅಧಿಕಾರಿಗಳ ಆಳ್ವಿಕೆಯಲ್ಲಿ ಅನೇಕ ಕವಿಗಳು ಭಾಷಣ, ಚರ್ಚೆ, ಸ್ವಾತಂತ್ರ್ಯ ಘೋಷಣೆಗಳ ಮೂಲಕ ಎಲ್ಲರನ್ನು ಒಂದುಗೂಡಿಸುವಲ್ಲಿ ಯಶಸ್ವಿಯಾದರು. ಅವರುಗಳ ಹೆಸರುಗಳನ್ನು ಇಲ್ಲಿ ಹೇಳಲಾಗಿದೆ. "ಬೆನಗಲ್ ರಾಮರಾಯರು, ಮುದವೀಡು ಕೃಷ್ಣರಾಯರು, ಆಲೂರು ವೆಂಕಟರಾಯರು, ಉತ್ತಂಗಿ ಚನ್ನಪ್ಪ, ಸರ್ ಸಿದ್ಧಪ್ಪ ಕಂಬಳಿ, ಗೋವಿಂದ ಪೈ, ಬಿ.ಎಂ. ಶ್ರೀ, ಗೊರೂರು ರಾಮಸ್ವಾಮಿ ಅಯ್ಯಂಗಾರ್, ಶಂಬಾಜೋಷಿ, ಬಿ. ಶಿವಮೂರ್ತಿಶಾಸ್ತ್ರಿ, ಅಂದಾನಪ್ಪ, ದೊಡ್ಡ ಮೇಟಿ"[೩] ಮುಂತಾದ ಕವಿಗಳು ವಿದ್ವಾಂಸರು ಕನ್ನಡ ಚಳುವಳಿಯನ್ನು ಕುರಿತು ಭಾಷಣ, ಸಂಘಟನೆ, ಪ್ರಚಾರಗಳಲ್ಲಿ ತೊಡಗಿ ಬಲವಾದ ಪ್ರಭಾವ ಬೀರಿದ್ದರು.

ಸ್ವಾತಂತ್ರ್ಯ ಹೋರಾಟಗಾರರ, ಕವಿಗಳ ಪ್ರಭಾವ, ಪ್ರೌಢ ಶಾಲಾ ಜೀವನದಲ್ಲಿಯೇ ಸಂಗಣ್ಣನವರ ಮೇಲೆ ಬೀರಿದೆ "ಕನ್ನಡ ಸಾಹಿತಿಗಳಾದ ಮಾಸ್ತಿವೆಂಕಟೇಶ ಅಯ್ಯಂಗಾರ್, ಬಿ.ಎಂ.ಶ್ರೀ, ಅನಕೃ, ಬೇಂದ್ರೆ ಮುಂತಾದ ಕವಿಗಳನ್ನು ಆನಂದರಾಯ ಎಂಬ ಗುರುಗಳು ಅವರನ್ನು ಕರೆಸಿ ಸ್ವರಚಿತ ಕವನ, ವಾಚನ, ಸಾಹಿತ್ಯಕ ಉಪನ್ಯಾಸಗಳನ್ನು ಶಾಲೆಯಲ್ಲಿ ಏರ್ಪಡಿಸುತ್ತಿದ್ದರು". ಇಡೀ ಸಾಹಿತ್ಯದ ವಿಸ್ತಾರವು ಹರಪನಹಳ್ಳಿ ಮತ್ತು ಶಾಲೆಯಲ್ಲಿ ತುಂಬಿ ತುಳುಕಾಡುತ್ತಿತ್ತು. ಎಲ್ಲಿ ಅಂದರಲ್ಲಿ ಸಾಹಿತ್ಯ, ಚಳುವಳಿ, ಸ್ವಾತಂತ್ರ್ಯ, ಸಮಾನತೆ, ಶೋಷಣೆಯ ಕೂಗು ಮುದೇನೂರು ಸಂಗಣ್ಣನವರ ಮೇಲೆ ಪ್ರಭಾವ ಬೀರಿದೆ.

ಈ ಎಲ್ಲಾ ಅಂಶಗಳ ಪರಿಣಾಮವೆ ಭಾಷಣ ಕಲೆ ಮತ್ತು ಸಾಹಿತ್ಯದ ರಚನೆಗೆ ಪ್ರೇರೆಪಿಸಿದೆ. ೧೯೪೫ರಲ್ಲಿ ಮಾಸ್ತಿಯವರನ್ನು ಕುರಿತು ಕವಿತೆಗಳನ್ನು ಬರೆದು ಶಿಕ್ಷಕರು, ಕವಿಗಳು, ಸ್ನೇಹಿತರ ಎದುರಿಗೆ

ವಾಚನ ಮಾಡಿದರು. ಆ ಜೀವನದಲ್ಲಿ ಸಾಹಿತ್ಯದ ಗೀಳನ್ನು ರೂಢಿಸಿಕೊಂಡಿರುವುದು ಮುದೇನೂರು ಸಂಗಣ್ಣನವರ ಪ್ರತಿಭೆಗೆ ಸಾಕ್ಷಿಯಾಗಿದೆ. ಎಲ್ಲಾ ಶಿಕ್ಷಕರ ವೃಂದದವರಿಗೆ ಮೊಟ್ಟ ಮೊದಲು ಗೌರವಕ್ಕೆ ಪಾತ್ರರಾದರು. ಈ ಸಾಹಿತ್ಯದ ರಚನೆಯನ್ನು ಸಂಗೀತಕ್ಕೆ ಅಳವಡಿಸಿಕೊಂಡು ಹಾಡುವ ಮಟ್ಟಿಗೆ ಪ್ರಸಿದ್ಧಿ ಪಡೆದರು. ಕೊನೆಗೆ ಕರ್ನಾಟಕ ಏಕೀಕರಣದ ಘಟನಾವಳಿಗಳನ್ನು ಬಿತ್ತರಿಸುವ 'ಜಯಂತಿ ಪತ್ರಿಕೆಯಲ್ಲಿ ಕವಿತೆಗಳು ಪ್ರಕಟವಾದವು. ಹೀಗೆ ಪ್ರೌಢಶಾಲಾ ಹಂತದಲ್ಲಿಯೇ ಮುದೇನೂರು ಸಂಗಣ್ಣನವರ ಬದುಕಿನ ರೂಪುರೇಷೆಗಳು ಬದಲಾದವು. ಭಾಷಣ, ಕವಿತೆಗಳು, ಕವಿಗಳ ಆದರ್ಶಗಳು, ಪ್ರಭಾವ, ಏಕೀಕರಣ ಹೋರಾಟ ನಾಯಕರ ಪ್ರಭಾವ, ಸ್ವಾತಂತ್ರ್ಯದ ಕೂಗುಗಳ ಮಧ್ಯೆಯೇ ಪ್ರೌಢಶಾಲೆಯ ಶಿಕ್ಷಣ ಮುಗಿಸಿದರು.

ಹೆಚ್ಚಿನ ವಿದ್ಯಾಭ್ಯಾಸಕ್ಕಾಗಿ ಮದನ ಪಲ್ಲಿಯ 'ಥಿಯಾಸಾಫಿಕಲ್'ಕಾಲೇಜಿಗೆ ಸೇರಿದರು. ಇಡೀ ಕಾಲೇಜಿನ ವಾತಾವರಣವೇ ತೆಲುಗು ಭಾಷೆಯನ್ನು ಆವರಿಸಿಕೊಂಡಿತ್ತು. ಮುದೇನೂರು ಸಂಗಣ್ಣನಲ್ಲಿ ಪ್ರತಿಭೆ ವಿದ್ಯೆ, ವಿನಯ ಇದ್ದುದರಿಂದ, ಕನ್ನಡ ಭಾಷೆಯ ಜೊತೆಗೆ, ತೆಲುಗನ್ನು ಕಲಿತರು. ಕಾಲೇಜಿನ ಅಧ್ಯಾಪಕರು ಬಂಗಾಳಿ ಭಾಷಿಗರಾಗಿದ್ದರು. ಅದಕ್ಕೆ ಮತ್ತೊಂದು ಕಾರಣ ಕಲ್ಕತ್ತಾದಿಂದ ಬಂಗಾಳಿ ಪತ್ರಿಕೆಗಳು, ನಿಯತಕಾಲಿಕೆಗಳು, ಕಾಲೇಜಿನ ಗ್ರಂಥಾಲಯಕ್ಕೆ ಬರುತ್ತಿದ್ದವು. ಆ ಪತ್ರಿಕೆಗಳಲ್ಲಿ ಹೆಚ್ಚು ಅರವಿಂದರ ಜೀವನ, ಸಾಹಿತ್ಯ, ಚರಿತ್ರೆಗೆ ಸಂಬಂಧಿಸಿದ್ದವು. ಅರವಿಂದರ ವಿಚಾರಧಾರೆಗಳು, ಸಂಗಣ್ಣನ ಮೇಲೆ ಪ್ರಭಾವ ಬೀರಿದವು.

ಅರವಿಂದರ ತಾತ್ವಿಕತೆಯಲ್ಲಿ ಮುಳುಗಿದರು. ಆಧ್ಯಾತ್ಮಿಕ ಚಿಂತನೆ ಮಾಡತೊಡಗಿದರು, ಕೊನೆಗೆ ಅಪ್ಪಟ "ಬ್ರಹ್ಮಚರ್ಯ" ಸ್ವೀಕರಿಸುವಷ್ಟರ ಮಟ್ಟಿಗೆ ಪ್ರಭಾವಕ್ಕೆ ಒಳಗಾದರು. ಪದವಿ ಪೂರ್ವ ಹಂತದ ಶಿಕ್ಷಣದಲ್ಲಿ ಬಂಗಾಳಿ ಭಾಷೆಯನ್ನು ಮಾತನಾಡಲು, ಓದಲು ಬರೆಯಲು ಕಲಿತರು. ಈ ಅಂಶಗಳನ್ನು ಅರಿತ ತಂದೆ ಕೊಟ್ರಬಸಪ್ಪ ಕಾಲೇಜು ಶಿಕ್ಷಣ ಮುಗಿಯುತ್ತಿದ್ದಾಗಲೇ ಮದುವೆ ಎಂಬ ಬಂಧನಕ್ಕೆ ಸಿಲುಕಿಸಿ ಬಿಟ್ಟರು. ಇಲ್ಲಿಗೆ ಶಿಕ್ಷಣ ಜೀವನದ ಹಂತವು ಕೊನೆಯಾಯಿತು. ಆದರೆ ಸ್ನೇಹಿತರು ಬಂಧು ಬಳಗದವರು, ಊರಿನ ಹಿತೈಷಿಗಳು ಮುದೇನೂರು ಸಂಗಣ್ಣನವರು ದೊಡ್ಡ ಅಧಿಕಾರಿಯಾಗುತ್ತಾರೆ. ವಕೀಲನಾಗುತ್ತಾರೆ. ಎಂಬ ಆಸೆ, ಆಕಾಂಕ್ಷೆಗಳು, ಆಶಯಗಳು ನುಚ್ಚು ನೂರಾದವು.

**ಕುಟುಂಬ ಹೊಣೆಗಾರಿಕೆ**

ತಂದೆ ಕೊಟ್ರಬಸಪ್ಪನವರು ಮನೆಯ ಕಡೆಗೆ ಹೆಚ್ಚು ಗಮನ ಹರಿಸುತ್ತಿದ್ದಿಲ್ಲ. ಸ್ವಾತಂತ್ರ್ಯ ಹೋರಾಟ, ಏಕೀಕರಣ ಚಳವಳಿ, ರಾಜಕಾರಣಿಗಳ ಒಡನಾಟದಲ್ಲಿಯೇ ಹೆಚ್ಚು ಸಮಯ ಕಳೆಯುತ್ತಿದ್ದನು. ಆದರೆ ಸಂಗಣ್ಣನವರು ದೊಡ್ಡ ರಾಜಕಾರಣಿಯಾಗಿ ಜನರ ಸೇವೆ ಮಾಡಬೇಕೆಂಬ ಕನಸನ್ನು ಹೊತ್ತುಕೊಂಡವರು.

ಈ ಪರಿಸ್ಥಿತಿ ವ್ಯವಸ್ಥೆಯ ಕಾರಣದಿಂದ ಏಳುನೂರು ಏಕರೆಯ ಜಮಿನ್ದಾರಿಕೆಯ ನೊಗವನ್ನು ಸಂಗಣ್ಣನವರು ಹೊತ್ತರು. ಇಡೀ ಭೂಮಿಯು ಫಲವತ್ತಾದ ಕಾರಣದಿಂದ ಹೊಗೆ ಸೊಪ್ಪು, ಶೇಂಗಾ, ಜೋಳ, ನವಣಿ, ಸಜ್ಜೆ ಮುಂತಾದವುಗಳನ್ನು ಸಮೃದ್ಧವಾಗಿ ಬೆಳೆಯುತ್ತಿದ್ದರು. ಒಂದು ಜಮಿನ್ದಾರಿಕೆಯ

ಮನೆ ಎಂದರೆ, ಆಳು, ಕಾಳು, ಎತ್ತು, ಹಸು, ಎಮ್ಮೆ ಸಾಮಾನ್ಯವಾಗಿ ಇರಲೇಬೇಕು. ಅವುಗಳೆಲ್ಲ ಇದ್ದರೆ ಮಾತ್ರ ಜಮಿನ್ದಾರಿಕೆ ಎನಿಸಿಕೊಳ್ಳುವುದು.

ಚಿಕ್ಕ ತಮ್ಮನಾದ ವಿರೂಪಾಕ್ಷ ಹರಪನಹಳ್ಳಿಯಲ್ಲಿ ಓದುತ್ತಿದ್ದನು. ಮನೆಯಲ್ಲಿ ಏನು ಅರಿಯದ ರಾಜೇಶ್ವರಿ, ಚಂದ್ರಮ್ಮ ಎಂಬ ತಂಗಿಯರಿದ್ದರು. ವ್ಯವಸಾಯ ನಿಭಾಯಿಸುವ ವ್ಯಕ್ತಿ ಬೇಕಾಗಿತ್ತು. ಇವರೆಲ್ಲರಿಗೂ ತಿಂಡಿ, ಊಟ ವ್ಯವಸ್ಥೆ ಮಾಡಲು ಸಿದ್ಧಮ್ಮನಿಗೆ ಕಷ್ಟವಾಗಿತ್ತು. ಈ ಎಲ್ಲಾ ಪರಿಸ್ಥಿತಿಯನ್ನು ಅರ್ಥ ಮಾಡಿಕೊಂಡ ಕೊಟ್ರಬಸಪ್ಪ ಮಗ ಸಂಗಣ್ಣನಿಗೆ ಮದುವೆ ಮಾಡಲು ನಿರ್ಧರಿಸಿ, ವಧುವನ್ನು ಹುಡುಕುವಲ್ಲಿ ಯಶಸ್ವಿಯಾದನು. ಹರಿಹರದ ಖಾಸಗಿ ಕಂಪನಿಯಲ್ಲಿ ಅಕೌಂಟಂಟ್ ಆಗಿ ಕಾರ್ಯ ನಿರ್ವಹಿಸುತ್ತಿದ್ದ ಬಸಪ್ಪ ಚನ್ನಬಸಮ್ಮ ಎಂಬ ಆದರ್ಶ ದಂಪತಿಗಳ ಮಗಳು 'ಶಾರದಮ್ಮ'ನವರ ಜೊತೆ ೧೯೪೪ರಲ್ಲಿ ಮುದೇನೂರು ಸಂಗಣ್ಣನವರು ಮದುವೆಯಾದರು.

## ಮದುವೆಯ ಸಂಭ್ರಮ

ಏಳು ದಿನಗಳ ಕಾಲ ನಡೆದ ಸಂಭ್ರಮದ ಮದುವೆಯಾಗಿತ್ತು. ಈ ಮದುವೆ ಎಂದು ಕಂಡರಿಯದ ಮುಂದೆಂದು ಮಾಡದ ಆಡಂಬರದ ಮದುವೆಯಾಗಿತ್ತು. ಸತತವಾಗಿ ಏಳು ದಿನಗಳ ಕಾಲ ಇಡೀ ಊರಿಗೆ ಅನ್ನ ಸಂತರ್ಪಣೆ ಮಾಡಿದ್ದರು. ಜೋಡು ಕುದುರೆಯ ಸಾರೋಟಿನಲ್ಲಿ ಬಂಡಿಯ ಮೇಲೆ ಮಧು ಮಕ್ಕಳನ್ನು ಕೂಡ್ರಿಸಿ ಮೆರವಣಿಗೆ ಮಾಡಿದ್ದರು. ಇಂತಹ ಸಂಭ್ರಮದ ಮದುವೆಯನ್ನು ಇವತ್ತಿಗೂಅಲ್ಲಿನ ಜನ ಸ್ಮರಿಸುತ್ತಾರೆ.

ಮುದೇನೂರು ಸಂಗಣ್ಣನವರಿಗೆ ಮದುವೆ ಆಯಿತು. ದಾಂಪತ್ಯಜೀವನಕ್ಕೆ ಕಾಲಿಟ್ಟರು. ಬಾಳ ಸಂಗಾತಿಯಾಗಿ ಶಾರದಮ್ಮನನ್ನು ಸ್ವೀಕರಿಸಿದರು. ನಮ್ಮ ದೇಶದ ಸಂಸ್ಕೃತಿ, ಆಚಾರ-ವಿಚಾರದಂತೆ ಮದುವೆ ನಡೆಯಿತು. ಆದರೆ ಶಾರದಮ್ಮ ಪೇಟೆಯ ಹೆಣ್ಣು ಮಗಳು ಪೇಟೆಯ ಜೀವನದಲ್ಲಿ ಬೆಳೆದವಳು. ಹಳ್ಳಿಯ ಜೀವನಕ್ಕೆ ಹೊಂದಿಕೊಳ್ಳಲು ಕಷ್ಟವಾಯಿತು. ಆ ಸಂದರ್ಭದಲ್ಲಿ ತಾಯಿಯಾಗಿ ಊರುಗೋಲಾಗಿ, ಸಹಾಯಕ್ಕೆ ಬಂದವಳು ಅತ್ತೆ ಸಿದ್ಧಮ್ಮ. ಏಕೆಂದರೆ ಚಿಗಟೇರಿಯ ಸಂಗಣ್ಣನವರ ಮನೆತನ ತುಂಬು ಕುಟುಂಬವುಳ್ಳ ಶ್ರೀಮಂತ ಮನೆತನ. ಆಳು-ಕಾಳುಗಳಿಂದ ತುಂಬಿಕೊಂಡಿದೆ. ಹಳ್ಳಿಯ ವಾತಾವರಣ ಬೇರೆ ಅವರೆಲ್ಲರಿಗೂ ತಿಂಡಿ, ಊಟ ವ್ಯವಸ್ಥೆ ಮಾಡುವಂತೆ ಧೈರ್ಯ ತುಂಬಿದಳು. ಆ ಕೆಲಸದಲ್ಲಿ ಅತ್ತೆ ಸಿದ್ಧಮ್ಮ ಭಾಗಿಯಾದಳು. ಸಹಾಯ, ಸಹಕಾರದೊಂದಿಗೆ ಮನೆಯ ಒಡನಾಟ ನಿಭಾಯಿಸುವ ಶಕ್ತಿ ಕರಗತವಾಯಿತು. ಈ ಹಳ್ಳಿಯ ವಾತಾವರಣಕ್ಕೆ ಶಾರದಮ್ಮ ಬಹುಬೇಗ ಹೊಂದಿಕೊಂಡಳು. ಇದರಿಂದ ಹರಿಹರದ "ತವರು ಮನೆ" ಕಡೆ ಗಮನಹರಿಸದೆ, ಮುದೇನೂರು ಕುಟುಂಬದಲ್ಲಿ ತಾನು ಒಬ್ಬಳಾಗಿ, ಸಂಗಣ್ಣನ ಜೀವನದ ಸಾಧನೆಗಳಿಗೆ, ಕುಟುಂಬದ ಬೆಳವಣಿಗೆಗೆ ಸಾಕ್ಷಿಯಾದಳು.

ಕುಟುಂಬದ ಒಡತಿಯಾಗಿ ಶಾರದಮ್ಮ ಮನೆಯನ್ನು ನಿಭಾಯಿಸಿದರೆ, ಮನೆಯ ವ್ಯವಹಾರ, ವ್ಯಸಾಯದ ಜೀವನವನ್ನು ಸುಧಾರಿಸುವಲ್ಲಿ ಸಂಗಣ್ಣನವರ ಜವಾಬ್ದಾರಿ ಹೆಚ್ಚಾಯಿತು. ತಮ್ಮ ವಿರೂಪಾಕ್ಷಪ್ಪನ ಶೈಕ್ಷಣಿಕ ಜೀವನಕ್ಕೆ ಒತ್ತು ಕೊಟ್ಟರು. ಬಿ.ಎ. ಪದವಿ ಮಾಡಿಸಿದರು. ವಕೀಲ ಪದವಿ ಮಾಡಿಸಬೇಕೆಂಬ

ಹಂಬಲವಿತ್ತು. ಆದರೆ ಆ ಆಸೆ ದಕ್ಕಲಿಲ್ಲ. ಬದಲಿಗೆ ವಿರೂಪಾಕ್ಷಪ್ಪ ಕೃಷಿ ಕಡೆಗೆ ಹೆಚ್ಚಿನ ಆಸಕ್ತಿ ಹರಿಸಿದನು. ಇದರಿಂದ ಸಂಗಣ್ಣನವರಿಗೆ ಮತ್ತಷ್ಟು ಬಲ ಬಂದಾಯಿತು. ಕೃಷಿಯ ವ್ಯವಸ್ಥೆಯನ್ನು ವಿರೂಪಾಕ್ಷಪ್ಪ ನೋಡಿಕೊಳ್ಳುತ್ತಿದ್ದನು. ಸ್ವಲ್ಪ ವಿರಾಮ ಸಿಕ್ಕ ಕಾರಣದಿಂದ, ರೈತರಿಗೆ ಆಗುವ ಅನ್ಯಾಯಗಳನ್ನು ಕಂಡು ಅದನ್ನು ಸರಿಪಡಿಸಲು, ತಂಬಾಕು ಮಾರಾಟದ ಖರೀದಿಯಿಂದ ರೈತರಿಗೆ ಸರಿಯಾದ ನ್ಯಾಯ ಸಮ್ಮತ ಬೆಲೆ ಸಿಗಲೆಂದು ದಲ್ಲಾಳಿ ವ್ಯಾಪಾರದ ಜೀವನಕ್ಕೆ ತೊಡಗಿಸಿಕೊಂಡಿದ್ದರು. ವ್ಯಾಪಾರಿಗಳ ಸಂಪರ್ಕದಿಂದ ಸಾಹಿತ್ಯದ ರಸಾನುಭವವನ್ನು ಪಡೆದುಕೊಂಡರು. ಅವರಿಂದ ನಾಟಕ, ನೃತ್ಯ, ಬಯಲಾಟಗಳನ್ನು ನೋಡಿ ಆನಂದದಾಯಕರಾದರು.

ದಲಿತ ದಮನಿತವರ್ಗದ ನಡುವೆ ಇದ್ದು ಕೃಷಿ ಕೆಲಸಗಾರರ ಒಡನಾಡಿಯಾಗಿ ಅವರು ಹಾಡುವ ಪದಗಳನ್ನು ಸಂಗ್ರಹಿಸಿ ಸಂಪಾದಿಸಿದರು. ವ್ಯಾಪಾರ, ಸಾಹಿತ್ಯ, ಸಂಗ್ರಹ, ಸಂಪಾದನೆ, ಸಂಘಜೀವನ ಹೀಗೆ ವಿವಿಧ ಕ್ಷೇತ್ರಗಳಲ್ಲಿ ತನ್ನನ್ನು ಗುರುತಿಸಿಕೊಂಡರು. ಎಲ್ಲಾ ಅಸ್ಪೃಶ್ಯ ಜಾತಿಗಳೊಂದಿಗೆ ಹೆಚ್ಚು ಒಡನಾಟವಿದ್ದುದರಿಂದ, ಜಾತಿ ಭ್ರಷ್ಟತೆಗೆ ಕಾರಣನಾದನು. ಅದರಿಂದ ಏಳು ವರ್ಷಗಳ ಕಾಲ ತನ್ನ ಕುಲದಿಂದಲೇ ಬಹಿಷ್ಕಾರಕ್ಕೆ ಒಳಗಾದರು ಇಂತಹ ಘಟನೆ ಸಂಗಣ್ಣನವರ ಹದಿನಾಲ್ಕನೆಯ ವಯಸ್ಸಿನಲ್ಲಿಯೇ ನಡೆದಿದೆ. ಜಾತಿ, ಕುಲ, ವರ್ಗ, ನ್ಯಾಯ, ನೀತಿ, ಸಂಪ್ರದಾಯ, ಆಚಾರ, ವಿಚಾರ, ಮೂಢನಂಬಿಕೆಗಳನ್ನು ಕಿತ್ತಾಕಿ ನ್ಯಾಯ ಸಮ್ಮತವಾದ ಸಮಾನತೆಯನ್ನು ಎತ್ತಿ ಹಿಡಿದರು. ಇದು ಜೀವನದಲ್ಲಿ ನಡೆದು ಹೋದ ಎಂದು ಮರೆಯದ ಘಟನೆಯಾಗಿದೆ. ಇಂತಹ ಸಾಮಾಜಿಕ ವ್ಯವಸ್ಥೆಯನ್ನು ಎದುರಿಸುವ ಧೈರ್ಯ, ಸಾಮರ್ಥ್ಯ ಹುಟ್ಟು ಜೀವನದಲ್ಲಿಯೇ ಬಂದಿದೆ. ಆತ್ಮ ಸ್ಥೈರ್ಯವೇ ಇವೆಲ್ಲವುಗಳನ್ನು ಮೆಟ್ಟಿ ನಿಂತಿದ್ದರಿಂದ. ವ್ಯಾಪಾರ, ಸಾಹಿತ್ಯ, ಸಂಗ್ರಹ, ಸಂಪಾದನೆ, ಜಾನಪದ ಸಾಹಿತ್ಯದಂತಹ ಸಾಧನೆಯತ್ತಾ ಕೊಂಡೊಯ್ದವು. ಶ್ರೀಮಂತನಾಗಿದ್ದರೂ, ವ್ಯಾಪಾರಿಯಾಗಿ, ಸಾಹಿತಿಯಾಗಿ, ಏಕೀಕರಣ ಚಳುವಳಿ, ಸಮಾಜ ಸೇವೆ, ರಾಜಕೀಯ ಒಡನಾಟಗಳತ್ತ ಗಮನಹರಿಸಿದರು. ಇವುಗಳ ಜೊತೆಗೆ ಸಂಸಾರದ ಜಂಜಾಟದ ಜವಾಬ್ದಾರಿಯನ್ನು ಹೊತ್ತುಕೊಂಡಿದ್ದರು. ಮುದೇನೂರು ಸಂಗಣ್ಣ ಮತ್ತು ಶಾರದಮ್ಮ ದಂಪತಿಗಳಿಗೆ ನಾಲ್ಕು ಜನ ಮಕ್ಕಳು ಅದರಲ್ಲಿ ಹಿರಿಯ ಮಗ ಅಶೋಕ, ನಂತರದಲ್ಲಿ ರಾಜೇಶ್ವರಿ, ಜಯಲಕ್ಷ್ಮಿ, ನಾಗಲೀಲಾ ಎಂಬ ಮೂವರು ಪುತ್ರಿಯರು ಜನಿಸಿದ್ದರು. ಮಗ ಅಶೋಕ ಪದವಿ ಪೂರ್ವ ಶಿಕ್ಷಣದವರೆಗೆ ವಿದ್ಯಾಭ್ಯಾಸ ಮಾಡಿದನು. ಇಷ್ಟಕ್ಕೆ ಶಿಕ್ಷಣವನ್ನು ಮೊಟಕುಗೊಳಿಸಿ, ಕೃಷಿ ಕೆಲಸದಲ್ಲಿ ತೊಡಗಿಕೊಂಡನು. ವ್ಯಾಪಾರದ ದೊಡ್ಡ ಉದ್ಯಮಿಯಾದುದರಿಂದ ಚಿಕ್ಕಪ್ಪ ವಿರೂಪಾಕ್ಷಪ್ಪನು ಮನೆ, ಅಂಗಡಿ ಜಮೀನು ಇವೆಲ್ಲವುಗಳನ್ನು ತೂಗಿಸಿಕೊಂಡು ಹೋಗಲು ಸಾಧ್ಯವಾಗಲಿಲ್ಲ. ಇವುಗಳನ್ನು ನಿರ್ವಹಿಸಿಕೊಂಡು ಹೋಗುವ ಜವಾಬ್ದಾರಿಯನ್ನು ಅಶೋಕ ವಹಿಸಿಕೊಂಡನು.

ಮುದೇನೂರು ಸಂಗಣ್ಣನವರ ಇಡೀ ಕುಟುಂಬವು ಕೃಷಿ, ವ್ಯಾಪಾರದಲ್ಲಿ ತೊಡಗಿಕೊಂಡಿತು. ಆದರೆ ಸಂಗಣ್ಣನವರು ಸಮಾಜ ಸೇವೆ ಮಾಡಬೇಕೆಂದು, ೧೯೭೭ರಲ್ಲಿ ಹರಪನಹಳ್ಳಿ ವಿಧಾನ ಸಭಾ ಕ್ಷೇತ್ರಕ್ಕೆ ಸ್ಪರ್ಧಿಸಿ ಸೋಲನ್ನು ಅನುಭವಿಸಿದರು. ಈ ರಾಜಕೀಯಕ್ಕೆ ವಿರಾಮ ಹೇಳಿ, ಮತ್ತೆ ಸಾಹಿತ್ಯದ ಕಡೆಗೆ ಒಲವು ಬೆಳೆಸಿಕೊಂಡರು ಸಂಗಣ್ಣನವರು ತನ್ನ ಜೀವಿತದ ಕೊನೆಯವರೆಗೂ ಜಾನಪದ

ಸಾಹಿತ್ಯ, ರಂಗ ಕಲೆ, ಸಂಗ್ರಹ, ಸಂಪಾದನೆ, ನಾಟಕ ರಚನೆ, ಹಾಗೂ ನಿರ್ದೇಶನ ಇವುಗಳಲ್ಲಿ ತಲ್ಲೀನರಾದರು.

ಜೀವನದ ಕೊನೆಯ ದಿನಗಳನ್ನು ದೇಶಿಯ ಸಂಗೀತದಲ್ಲೆ ಕಾಲ ಕಳೆದರು. ಬಂದು-ಬಳಗ, ಸ್ನೇಹಿತರೆಲ್ಲರನ್ನು ಕರೆಯಿಸಿ. ಇದು ನನ್ನ 'ವೈಕುಂಟದ ಊಟ' ಎಂದು ಹೇಳಿ ತಾನು ಜೀವಂತವಿದ್ದಾಗಲೇ ಎಲ್ಲರಿಗೂ ಊಟ ಮಾಡಿಸಿದ್ದುಂಟು. ಹೀಗೆ ತೃಪ್ತನಾದ ಸಂಗಣ್ಣ, ತನ್ನ ದೇಹ ವೈದ್ಯಕೀಯ ಕಾಲೇಜಿನ ವಿದ್ಯಾರ್ಥಿಗಳಿಗೆ ಉಪಯೋಗವಾಗಲೆಂದು ಬಾಪೂಜಿ ವೈದ್ಯಕೀಯ ಕಾಲೇಜಿಗೆ ದಾನ ಮಾಡಿದ ಸಂಗಣ್ಣನವರು, ೨೬-೧೦-೨೦೦೮ರಂದು ಇಹಲೋಕವನ್ನು ತ್ಯಜಿಸಿದರು.

## ಮುದೇನೂರು ಸಂಗಣ್ಣನವರ ಸಾಧನೆಗಳು

ಕೃಷಿ ಮನೆತನದಲ್ಲಿ ಹುಟ್ಟಿದ ಸಂಗಣ್ಣನವರು ಏಳುನೂರು ಎಕರೆ ಜಮೀನಿಗೆ ಭೂ ಒಡೆಯರಾಗಿದ್ದರು. ಗತ್ತು, ಗಮ್ಮತ್ತು, ದರ್ಪ, ಶ್ರೀಮಂತಿಕೆಯ ಗರ್ವದಿಂದ ಮೆರೆಯಬೇಕಾದ ಸಂಗಣ್ಣನವರು ಸರಳ ಸಜ್ಜನಿಕೆ, ಪ್ರೀತಿ, ವಿಶ್ವಾಸ, ಅನುಕಂಪದಿಂದ ಬದುಕಿದವರು. ಸಾರ್ವಜನಿಕ ಸೇವೆಗಾಗಿಯೇ ತಮ್ಮ ಜೀವನವನ್ನು ಮುಡುಪಾಗಿಟ್ಟಿದ್ದರು.

ಹರಪನಹಳ್ಳಿ, ಚಿಗಟೇರಿ, ಕೊಟ್ಟೂರು ಮುಂತಾದ ಸ್ಥಳಗಳಲ್ಲಿ ಅಧಿಕ ಪ್ರಮಾಣದಲ್ಲಿ ಹೊಗೆ ಸೊಪ್ಪನ್ನು ಬೆಳೆಯುತ್ತಿದ್ದರು. ಆ ಬೆಳೆಗೆ ತಕ್ಕ ಪ್ರತಿಫಲ ಸಿಗುತ್ತಿರಲಿಲ್ಲ. ಜೊತೆಗೆ ವ್ಯಾಪಾರಿಗಳ ಮೋಸದಿಂದ ರೈತರು ತತ್ತರಿಸಿ ಹೋಗಿದ್ದರು. ಈ ಭಾಗಗಳಲ್ಲಿ ಸಮಸ್ಯೆಯನ್ನು ಕಂಡ ಸಂಗಣ್ಣನವರು ರೈತರೊಂದಿಗೆ, ಸ್ನೇಹಿತರೊಂದಿಗೆ ಬಳ್ಳಾರಿ ಜಿಲ್ಲೆಯ ಕಾಂಗ್ರೆಸ ಮುಖಂಡರೊಂದಿಗೆ ಚರ್ಚಿಸಿದರು. ಆ ಚರ್ಚೆಯ ವಿವರಣೆ ಏನೆಂದರೆ "ಹೊಗೆ ಸೊಪ್ಪಿನ ವ್ಯಾಪಾರ ಮಾಡುವುದರಿಂದ ಗಾಂಧೀಜಿಯವರ ತತ್ವ ಸಿದ್ಧಾಂತ, ಸ್ವಾತಂತ್ರ್ಯ ಹೋರಾಟದ ಮನಸ್ಥಿತಿಯ ಮೇಲೆ ಏನಾದರೂ ವ್ಯತಿರಿಕ್ತ ಪರಿಣಾಮ ಬೀರಬಹುದೆ.[೫] ಎಂಬ ಸಂಗತಿಯನ್ನು ಪ್ರಶ್ನೆ ಆಧಾರಿತವಾಗಿ ಚರ್ಚಿಸಿದರು. ಆ ಚರ್ಚೆಯಲ್ಲಿ ಬಂದ ಪ್ರತ್ಯುತ್ತರ 'ಸಮಾಜ ಸೇವೆ ಮಾಡಲು ಯಾವ ವೃತ್ತಿಯಾದರೇನು? ನ್ಯಾಯ ಸಮ್ಮತವಾಗಿರಬೇಕು ಎಂಬ ತಾತ್ವಿಕ ನಿಲುವಿಗೆ ಬಂದರು. ಈ ಸಮಸ್ಯೆಗೆ ಪರಿಹಾರವಾಗಿ "೧೯೫೨ ಜನವರಿ ತಿಂಗಳಲ್ಲಿ ಚಿಗಟೇರಿಯಲ್ಲಿ ತಂಬಾಕಿನ ಸಗಟು ಖರೀದಿ ಹಾಗೂ ದಲ್ಲಾಳಿ ವ್ಯಾಪಾರದ ಅಂಗಡಿಯನ್ನು ಆರಂಭಿಸಿದರು."[೬] ಈ ವ್ಯಾಪಾರದಿಂದ ರೈತರಿಗೆ ನ್ಯಾಯಯುತವಾದ ಬೆಲೆ ಸಿಕ್ಕಿತು. ಹೊಗೆ ಸೊಪ್ಪನ್ನು ಖರೀದಿಸುವ, ಮನ ಬಂದಂತೆ ಕೇಳುವ ವ್ಯಾಪಾರಿಗಳಿಂದ ರೈತರಿಗೆ ಮುಕ್ತಿ ದೊರಕಿತು.

ಈ ವ್ಯಾಪಾರದ ವಹಿವಾಟವು ಜನೋಪಕಾರಿಯಾಗಿ ಬೆಳೆಯಲಾರಂಭಿಸಿತು. ಇದರಿಂದ ಹರಿಹರ, ಹರಪನಹಳ್ಳಿ, ಹಡಗಲಿಯಿಂದ ತಂಬಾಕು ಚಿಗಟೇರಿಗೆ ಸರಬರಾಜಾಗುತ್ತಿತ್ತು ಹೀಗೆ ಬೇರೆ-ಬೇರೆ ಕಡೆಯಿಂದ ಬೆಳೆದ ತಂಬಾಕು ಉತ್ಪಾದನೆಯನ್ನು ರೈತರು ತರುತ್ತಿದ್ದರು. ಇದನ್ನು ಖರೀದಿ ಮಾಡಲು ಕರ್ನಾಟಕದಲ್ಲಿ ದಾವಣಗೆರೆ, ಭಾರತದ ಕೆಲವು ರಾಜ್ಯಗಳಾದ ಮಹಾರಾಷ್ಟ್ರ, ನಾಗಪುರ, ನಿಪ್ಪಾಣಿ, ಹೈದ್ರಾಬಾದ್ ಕಡೆಗಳಿಂದ ದೊಡ್ಡ ವ್ಯಾಪಾರಿಗಳು ಚಿಗಟೇರಿ ಗ್ರಾಮಕ್ಕೆ ಸುಗ್ಗಿಯ ಕಾಲದಲ್ಲಿ ಬಂದು

ಜಿಡಾರ ಹೂಡುತ್ತಿದ್ದರು. ಅವರೆಲ್ಲರೂ ಸಂಗಣ್ಣನವರ ಅಂಗಡಿ ಮತ್ತು ಮನೆಯಲ್ಲಿಯೇ ಉಳಿದುಕೊಳ್ಳುತ್ತಿದ್ದರು. ವಸತಿ ಮತ್ತು ಊಟದ ವ್ಯವಸ್ಥೆಯನ್ನು ಸಂಗಣ್ಣನವರೇ ನೋಡಿಕೊಳ್ಳುತ್ತಿದ್ದರು. ಅದರಲ್ಲಿ ಹೆಚ್ಚು ಮರಾಠಿಗರಿದ್ದುದರಿಂದ, ಮರಾಠರ ಒಡನಾಟ ಹಾಗೂ ಮರಾಠಿ ಭಾಷೆಯನ್ನು ಮುದೇನೂರು ಸಂಗಣ್ಣನವರು ಕಲಿತರು. ಮರಾಠರ ಒಡನಾಟವಿದ್ದುದರಿಂದ, ಅವರೊಂದಿಗೆ ನಾಟಕವನ್ನು ನೋಡುವ ಕುತೂಹಲ ಬೆಳೆಸಿಕೊಂಡರು. ಆ ಸಂದರ್ಭ ಭಾರತಕ್ಕೆ ಸ್ವಾತಂತ್ರ್ಯ ಬಂದ ಸಂಭ್ರಮ. ಆದರೆ ಕರ್ನಾಟಕದ ಪ್ರದೇಶಗಳು ಹಂಚಿ ಹೋಗಿದ್ದವು. ಇದರಿಂದ ಕರ್ನಾಟಕ ಏಕೀಕರಣ ಚಳುವಳಿ ತೀವ್ರವಾಗಿ ಬೆಳೆಯಲಾರಂಬಿಸಿತು.

ಈ ಚಳುವಳಿಯ ಕಡೆಗೆ ಸಂಗಣ್ಣನವರು ಗಮನಹರಿಸಿದರು. ಆದರೆ ವ್ಯಾಪಾರದ ಕಾರ್ಯನಿರ್ವಹಣೆಯನ್ನು ಎಸ್.ಈಶ್ವರಪ್ಪ ಮತ್ತು ಗುರು ಶಾಂತನಗೌಡರು ನಿಭಾಯಿಸಿಕೊಂಡು ಹೋದರು. ಎಲ್ಲರ ಪ್ರೀತಿ ವಿಶ್ವಾಸಗಳಿಸಿ, ಅಂಗಡಿಯ ಮಾಲೀಕರಂತೆ ನೋಡಿಕೊಂಡರು. ನಿಷ್ಠೆಯಿಂದ ವ್ಯವಹಾರ ಮಾಡಿ ಸಂಗಣ್ಣನವರ ಹೆಸರನ್ನು ಮತ್ತಷ್ಟು ಬೆಳೆಸಿದರು. ಸಂಗಣ್ಣನವರ ಆಪ್ತ ಸ್ನೇಹಿತರಾಗಿ ಗೌರವಕ್ಕೆ ಘನತೆಗೆ ದಕ್ಕೆ ಬರದಂತೆ, ವ್ಯವಹಾರಕ್ಕೆ ಚ್ಯುತಿ ಬರದಂತೆ ಮುನ್ನೆಡೆಸಿಕೊಂಡು ಹೋದರು. ಏಕೀಕರಣ ಚಳುವಳಿ ಮತ್ತು ಸಾಹಿತ್ಯದ ಆಸಕ್ತಿ ಕಡೆಗೆ ವಲಸೆ ಹೋಗಿದ್ದರಿಂದ ಸಂಗಣ್ಣನವರು ವ್ಯಾಪಾರದ ಅಂಗಡಿಯಲ್ಲಿ ಅಪರೂಪವಾಗಿ ಕಾಣಿಸಿಕೊಳ್ಳುತ್ತಿದ್ದರು. ಸಂಗಣ್ಣನವರು ನ್ಯಾಯ ಒದಗಿಸುವ ಅಧಿಕಾರಿ ಅಲ್ಲದಿದ್ದರೂ, ವ್ಯಾಪಾರದ ಮೂಲಕ ರೈತರಿಗೆ ಉತ್ತಮ ಬೆಲೆಕೊಟ್ಟು ತಂಬಾಕು ಖರೀದಿ ಮಾಡುವ ಮತ್ತೆ ಬೇರೆ ಕಡೆಗೆ ಮಾರುವ ದೊಡ್ಡ ವ್ಯಾಪಾರಿಯಾದರು. ವ್ಯಾಪಾರದ ಮೂಲಕ ರೈತರಿಗೆ ನ್ಯಾಯ ಒದಗಿಸಿದ್ದು ಮೊಟ್ಟ ಮೊದಲ ಸಾಧನೆಯಾಗಿದೆ.

ದೇವರು ಜ್ಯೋತಿಷಿಗಳ ಬಗ್ಗೆ ನಂಬಿಕೆ ಇರದ ಸಂಗಣ್ಣನವರು ಅಪರೂಪವಾಗಿ ಅಂಗಡಿಯಲ್ಲಿ ಕುಳಿತುಕೊಳ್ಳುತ್ತಿದ್ದರು. ಆಗ ಜೋತಿಷ್ಯ ಹೇಳುವ ಬಾಡದ ದರ್ಮಜ್ಞ ಕೂಡ ಅಂಗಡಿಯಲ್ಲಿ ಕುಳಿತುಕೊಂಡಾಗ, ಜನರು, ಕಳೆದು ಹೋದ ಎಮ್ಮೆ, ಹಸುಗಳನ್ನು ಕುರಿತು ಪ್ರಶ್ನೆ ಕೇಳುತ್ತಿದ್ದರು. ಅದಕ್ಕೆ ಜ್ಯೋತಿಷಿಯು ದಿಕ್ಕುಗಳನ್ನು ತೋರಿಸಿ ಆ ದಿಕ್ಕಿನ ಕಡೆಗೆ ಹೋಗಿವೆ ಎಂದು ಭವಿಷ್ಯ ನುಡಿಯುತ್ತಿದ್ದನು. ಇವುಗಳ ಬಗ್ಗೆ ನಂಬಿಕೆ ಇಲ್ಲದಿದ್ದರೂ ಸಂಗಣ್ಣನವರು, ಜ್ಯೋತಿಷಿಯ ಒಡನಾಟದಲ್ಲಿ ವಿಶ್ವಾಸದಿಂದ ಇರುತ್ತಿದ್ದರು.

ಸಾಂಪ್ರದಾಯಕ ಹಬ್ಬಗಳಾದ ದಸರಾ, ದೀಪಾವಳಿ, ವರಮಹಾಲಕ್ಷ್ಮೀ ಅಂತಹ ಹಬ್ಬಗಳನ್ನು ಊರಿನ ಜನರು ಅಂಗಡಿಗಳನ್ನು ಪೂಜೆಯ ಮೂಲಕ ಆಚರಿಸುತ್ತಿದ್ದರು. ಆದರೆ ಸಂಗಣ್ಣನವರು ಸಾಂಸ್ಕೃತಿಕ ಕಾರ್ಯಕ್ರಮಗಳನ್ನು ಏರ್ಪಡಿಸಿ ಅದರಿಂದ ಇಡೀ ಊರಿನ ಜನರಿಗೆ ರಸದೌತಣವನ್ನು ಉಣಬಡಿಸುತ್ತಿದ್ದರು. ಸಿಹಿ ಊಟವನ್ನು ಹಂಚುತ್ತಿದ್ದರು. ವಿವಿಧ ರೀತಿಯ ಕಲಾವಿದರನ್ನು ಕರೆಯಿಸಿ ಅವರಿಂದ ಸಾಹಿತ್ಯದ ರಸವನ್ನು ಹೀರಿಕೊಳ್ಳುತ್ತಿದ್ದರು. ಮುದೇನೂರು ಸಂಗಣ್ಣನವರು ವ್ಯಾಪಾರದ ನಡುವೆ ಸಾಹಿತ್ಯದ ಸವಿಯನ್ನು ಉಂಡವರು. ದೇಶಿಯ ಆಟಗಳಾದ ಗೊರವರ ಕಲೆ, ಲಂಬಾಣಿ

ಕುಣಿತ, ವೀರಗಾಸೆ, ಗೊಂಬೆ ಆಟ, ಯಕ್ಷಗಾನ ಮುಂತಾದವುಗಳನ್ನು ಕಲಾವಿದರು ಪ್ರದರ್ಶಿಸುತ್ತಿದ್ದರು. ಅದರಿಂದ ದೇಶಿಯ ಸಂಸ್ಕೃತಿಯನ್ನು ಉಳಿಸುವ, ಕಲೆಯನ್ನು ಬೆಳೆಸುವ ಚೌಕಟ್ಟು ನಿರ್ಮಾಣವಾಗುತ್ತಿತ್ತು.

**ಕರ್ನಾಟಕ ಏಕೀಕರಣ ಚಳುವಳಿಯ ರೂವಾರಿ**

ವ್ಯಾಪಾರಿ, ಸಾಹಿತ್ಯದ ನಡುವೆ ಕರ್ನಾಟಕ ಏಕೀಕರಣ ಚಳುವಳಿಯಲ್ಲಿ ಭಾಗವಹಿಸಿದರು. ಹರಪನಹಳ್ಳಿ, ಹೊಸಪೇಟೆ, ಕೊಟ್ಟೂರು, ಬಳ್ಳಾರಿ ಪ್ರದೇಶಗಳಲ್ಲಿ ತೆಲುಗರ ಪ್ರಭಾವದಿಂದ ಕನ್ನಡಿಗರು ತತ್ತರಿಸಿ ಹೋಗಿದ್ದರು. ಬಳ್ಳಾರಿ ತೆಲುಗು ಭಾಷಿಗರ ಪ್ರಾಂತ್ಯ ಅದನ್ನು ಆಂಧ್ರಕ್ಕೆ ಸೇರಿಸಬೇಕು ಎಂದು ತೆಲುಗು ಭಾಷಿಕನಾದ 'ಪಟ್ಟಾಭಿರಾಮುಲು' ಬಲವಾಗಿ ಪ್ರತಿಪಾದಿಸಿದ. ಈ ಘಟನೆಗಳನ್ನು ಕಂಡ ಸಂಗಣ್ಣ ಚಳುವಳಿಯ ನಾಯಕತ್ವ ವಹಿಸಿಕೊಂಡರು. ತೆಲುಗು ಭಾಷೆ ಬಲ್ಲವರಾಗಿದ್ದ ಸಂಗಣ್ಣನವರು ತೆಲುಗರ ವಿರುದ್ದ ಸಿಂಹ ಸ್ವಪ್ನವಾಗಿ ನಿಂತರು.

ನಮ್ಮ ಅಖಂಡ ಕರ್ನಾಟಕದಲ್ಲಿ ಬಳ್ಳಾರಿಯು ಒಂದು. ಅದನ್ನು ಬೇರ್ಪಡಿಸಲು ಯಾರಿಂದಲೂ ಸಾಧ್ಯವಿಲ್ಲ. ಎಂದು ಉಗ್ರವಾದ ಭಾಷಣವನ್ನು ಮಾಡಿದರು. ತೀವ್ರವಾದ ಭಾಷಣ ಕಂಡ ಪೊಲೀಸರು ಸಂಗಣ್ಣನನ್ನು ಬಂಧಿಸಿದರು. ಅದರ ಪರಿಣಾಮವಾಗಿ ಇಡೀ ಚಿಗಟೇರಿ ಗ್ರಾಮವು ಪೊಲೀಸರ ದೌರ್ಜನ್ಯ ನೀತಿಯನ್ನು ಖಂಡಿಸಿ ಮೌನ ಮೆರವಣಿಗೆ ನಡೆಸಿತು. ಸಂಗಣ್ಣನವರು ಬಿಡುಗಡೆಯಾಗಲೇ ಇಲ್ಲ. ಒಂದು ತಿಂಗಳ ಕಾಲ 'ಎರವಾಡ' ಜೈಲಿನಲ್ಲಿ ಶಿಕ್ಷೆ ಅನುಭವಿಸಬೇಕಾಯಿತು. ಬಿಡುಗಡೆಯಾಗುವ ಸಂದರ್ಭದಲ್ಲಿ ಕರ್ನಾಟಕ ಏಕೀಕರಣವು ಆಯಿತು. ಆ ಶುಭ ಸಂತೋಷಕ್ಕಾಗಿ ಚಿಗಟೇರಿ ಗ್ರಾಮಕ್ಕೆ ಹೋಳಿಗೆ ಊಟ ಹಾಕಿಸಿದರು. ಈ ಶುಭ ಸಂಭ್ರಮವನ್ನು ನೂರೊಂದು ಎತ್ತಿನ ಗಾಡಿಗಳನ್ನು ಕಟ್ಟಿ ಚಿಗಟೇರಿ ಗ್ರಾಮದಿಂದ ಹಿಡಿದು ಹರಪನಹಳ್ಳಿ, ಕೊಟ್ಟೂರು ರಸ್ತೆಯವರೆಗೂ ಮೆರವಣಿಗೆ ಮಾಡಿದರು.

**ರಾಜಕೀಯ ಪ್ರೇರಣೆ ಮತ್ತು ಸೋಲು**

ಮುದೇನೂರು ಸಂಗಣ್ಣನವರು ವ್ಯಾಪಾರ, ಭಾಷಣ, ಸಾಹಿತ್ಯದ ಜೊತೆಗೆ ಸಮಾಜ ಸೇವಾಕಾರ್ಯಗಳಲ್ಲಿ ತೊಡಗಿಕೊಂಡರು. ಆದ್ದರಿಂದ ಜನ ಸಾಗರೋಪಾದಿಯಲ್ಲಿ ಇವರ ಆದರ್ಶವನ್ನು ಪಾಲಿಸುತ್ತಿದ್ದರು. ತಂದೆ ಕೊಟ್ರಬಸಪ್ಪ ಜಿಲ್ಲಾ ಬೋರ್ಡ್ ಸದಸ್ಯರಾಗಿದ್ದರು. ಆತನ ಆಸೆಯು ಮಗ ರಾಜಕೀಯ ಕ್ಷೇತ್ರದಲ್ಲಿ ಬೆಳೆಯಬೇಕು, ಮತ್ತೊಂದೆಡೆ ಹಿರಿಯ ರಾಜಕಾರಣಿ ಕೊಂಡಜ್ಜಿ ಬಸಪ್ಪನ ಪ್ರೇರಣೆ ಇತ್ತು. ಇವುಗಳೆಲ್ಲಾ ಪ್ರೇರಣೆಯಿಂದ ೧೯೫೭ರಲ್ಲಿ ಅವಿರೋಧವಾಗಿ, ಚಿಗಟೇರಿ ಗ್ರಾಮ ಪಂಚಾಯಿತಿಯ ಸದಸ್ಯರಾಗಿ ಆಯ್ಕೆಯಾದರು. ಒಮ್ಮೆ ರಾಜಕೀಯಕ್ಕೆ ಇಳಿದ ಸಂಗಣ್ಣನವರು ಒಂದೊಂದೆ ಮೆಟ್ಟಿಲುಗಳನ್ನು ಹತ್ತಿದರು. ಚಿಗಟೇರಿಯ ಗ್ರಾಮ ಪಂಚಾಯಿತಿ ಚೇರ್ಮನ್ ಆಗಿ ಆಯ್ಕೆಯಾದರು. ಹರಪನಹಳ್ಳಿ ತಾಲ್ಲೂಕು ಬೋರ್ಡ್ ಸದಸ್ಯರಾಗಿ ಕಾರ್ಯನಿರ್ವಹಿಸಿದರು ಹೀಗೆ ಜನ ಸೇವೆಗೈದ ಸಂಗಣ್ಣನವರನ್ನು ಉನ್ನತ ಶ್ರೇಣಿಗೆ ಹೋಗುವಂತೆ ರಾಜಕೀಯ ಕ್ಷೇತ್ರವು ಆಹ್ವಾನಿಸಿತು.

ರಾಜಕೀಯ ತುಡಿತದಿಂದ ಜನ ಸೇವಾ ಕಾರ್ಯದಲ್ಲಿ ತೊಡಗಿಕೊಂಡರು ಮೊಟ್ಟ ಮೊದಲ ಬಾರಿಗೆ ಗ್ರಾಮ ಪಂಚಾಯಿತಿಯ ಅಧ್ಯಕ್ಷರಾಗಿ, ಸರ್ಕಾರಿ ಶಾಲೆ, ಗ್ರಾಮ ಪಂಚಾಯಿತಿ ಕೊಠಡಿ,

ಸರ್ಕಾರಿ ಆಸ್ಪತ್ರೆಗಳನ್ನು ಕಟ್ಟಿಸಲು ಮುಂದಾದರು. ಹಳ್ಳಿಯಲ್ಲಿ ಶಿಕ್ಷಣದ ಕೊರತೆ ಇದ್ದುದರಿಂದ ಚಿಗಟೇರಿಯ ಶ್ರೀ ನಾರದಮುನಿ ಶಿಕ್ಷಣ ಸಂಸ್ಥೆಯನ್ನು ಸಮಸ್ತ ಗ್ರಾಮಸ್ಥರ ಅಭಿಮತದಿಂದ 'ಶ್ರೀ ನಾರದಮುನಿ ಪ್ರೌಢಶಾಲೆಯನ್ನು' ಸ್ಥಾಪಿಸಲಾಯಿತು. ಆ ಶಿಕ್ಷಣ ಸಂಸ್ಥೆಯ ಮೊದಲ ಕಾರ್ಯದರ್ಶಿಯಾಗಿ ಆಯ್ಕೆಯಾದರು. ಅದರ ಉಸ್ತುವಾರಿ ನೋಡಿಕೊಳ್ಳುವ ಹಾಗೂ ಶಿಕ್ಷಣ ಸಂಸ್ಥೆಯಲ್ಲಿ ಎಲ್ಲ ಜನಾಂಗದ ನೌಕರರು ಸೇರಿಕೊಳ್ಳುವ, ಜಾತ್ಯಾತೀತ ಮನೋಭಾವನೆಯ ತತ್ವವನ್ನು ರೂಪಿಸಿದ್ದರು.

ಹಂತ ಹಂತವಾಗಿ ಬೆಳೆದ ಸಂಗಣ್ಣನವರು, ರಾಜಕೀಯ ಕ್ಷೇತ್ರದಿಂದ ಸಮಾಜ ಸೇವೆಗೆ ಮುಂದಾದರು. ಅದರ ತುಡಿತದಿಂದ ೧೯೬೭ರಲ್ಲಿ ಹರಪನಹಳ್ಳಿ ವಿಧಾನ ಸಭಾ ಕ್ಷೇತ್ರಕ್ಕೆ "ಪ್ರಜಾ ಸೋಷಲಿಸ್ಟ" ಪಕ್ಷದ ಅಭ್ಯರ್ಥಿಯಾಗಿ ಸ್ಪರ್ಧಿಸಿದರು. ಚುನಾವಣಾ ಪ್ರಚಾರಕ್ಕಾಗಿ ಏಳು ಸಾವಿರ ರೂಪಾಯಿಗಳನ್ನು ಖರ್ಚು ಮಾಡಿದರು. ಆ ಹಣವನ್ನು ಕಾರ್ಯಕರ್ತರಿಗೆ ಊಟ, ತಿಂಡಿ, ಕರಪತ್ರ, ಕಾರು ಬಾಡಿಗೆ, ಓಡಾಟಕ್ಕಾಗಿ ವ್ಯಯಿಸಿದರು. ಹೀಗೆ ವ್ಯಯ ಮಾಡಿದ ಸಂಗಣ್ಣನವರು ಚುನಾವಣೆಯಲ್ಲಿ ಸೋತರು. ಇದಕ್ಕೆ ಪ್ರಮುಖ ಕಾರಣ ಕಾಂಗ್ರೆಸ್ ಪಕ್ಷದ ಪ್ರಮುಖ ನಾಯಕರಾದ ಇಂಧಿರಾಗಾಂಧಿ, ನೆಹರು ಅವರು ಪ್ರಭಾವ ತೀವ್ರವಾಗಿ ಎದುರಾಳಿ ಇಜಾರಿ ಶಿರಸಪ್ಪನ ಮೇಲೆ ಬಿದ್ದಿತ್ತು. ಅವರ ಪ್ರಭಾವದಿಂದ ಏಳು ಸಾವಿರ ಮತಗಳ ಅಂತರದಲ್ಲಿ ಆತ ಜಯ ಸಾಧಿಸಿದರು.

ಆದರೆ ರಾಜಕೀಯದ ಒಳಮರ್ಮವನ್ನು ಸಂಗಣ್ಣನವರು ಅರಿತಿರಲಿಲ್ಲ. ಆಗ ಕುಡಿಯುವವರಿಗೆ ಶರಾಬು ಮತ್ತು ಸಣ್ಣ ಹಣಕಾಸಿನ ನೆರವು ನೀಡುವ ಪದ್ಧತಿ ಇತ್ತು. ಅಂದು ಚುನಾವಣಾ ಸ್ಪರ್ಧಾಳುಗಳಿಗೆ ಸ್ನೇಹಿತರು, ಅಧಿಕಾರಿಗಳು ಶುಭಾಶಯ ಹೇಳುತ್ತಿದ್ದರು. ಚುನಾವಣೆ ಎಂದರೆ ಸೇವಾ ಮಾರ್ಗ ಎಂದು ನಂಬಿದ್ದರು. ಇಂದು ಚುನಾವಣೆ ಹಣದ ಹೊಳೆಯಲ್ಲಿ ತೇಲಾಡುತ್ತಿದೆ. ಹೀಗೆ ಚುನಾವಣಾ ರಾಜಕೀಯದ ಸೋಲಿನ ನಂತರ ಮುಂದೆಂದು ರಾಜಕೀಯದ ಗಾಳಿಗೆ ಸಿಲುಕಲಿಲ್ಲ ಅದರ ಹತ್ತಿರ ಎಂದು ಸುಳಿಯಲಿಲ್ಲ. ಅದರ ಬದಲಿಗೆ ಸಾಹಿತ್ಯ ಮತ್ತು ವ್ಯಾಪಾರದ ಕಡೆಗೆ ಹೆಚ್ಚಿನ ಗಮನಹರಿಸಿದರು.

## ಸಾಂಸ್ಕೃತಿಕ ರೂವಾರಿಯಾಗಿ ಸಂಗಣ್ಣ

ರಾಜಕೀಯ ಕ್ಷೇತ್ರದಿಂದ ದೂರ ಸರಿದ ಸಂಗಣ್ಣನವರು ವ್ಯಾಪಾರದ ಅಂಗಡಿಯನ್ನು ಸಾರ್ವಜನಿಕ ಸಂಪರ್ಕ ಕೇಂದ್ರವಾಗಿ ಪರಿವರ್ತನೆ ಮಾಡಿದರು. ವ್ಯಾಪಾರವು ದಿನೇ ದಿನೇ ಬೆಳೆಯ ತೊಡಗಿತು. ತಂಬಾಕು ಖರೀದಿಗಾಗಿ ಮಹಾರಾಷ್ಟ್ರದ ವ್ಯಾಪಾರಿಗಳು ಬರುತ್ತಿದ್ದರು. ಮರಾಠಿಗರ ಸಂಪರ್ಕದಿಂದ ಮರಾಠಿ ನಾಟಕಗಳನ್ನು ನೋಡುವ ಅವಕಾಶ ಒದಗಿ ಬಂತು. ರಂಗ ಕಲಾವಿದರೊಂದಿಗೆ ಆತ್ಮೀಯ ಸ್ನೇಹ ಬೆಳೆಯ ತೊಡಗಿತು. ಮರಾಠಿ ಸಂಪರ್ಕದಿಂದ ನಾಗಪುರ, ನಿಪ್ಪಾಣಿ, ಖಾನಾಪುರ, ಅಥಣಿ ಭಾಗದಲ್ಲಿ ಏರ್ಪಡುತ್ತಿದ್ದ ಮರಾಠಿ ನಾಟಕಗಳಿಗೆ ಸಂಪನ್ಮೂಲ ವ್ಯಕ್ತಿಯಾಗಿ ಆಹ್ವಾನಿಸುತ್ತಿದ್ದರು. ಮರಾಠಿಗರ ಗೌರವಕ್ಕೆ ಪಾತ್ರರಾದ ಸಂಗಣ್ಣನವರು ಕನ್ನಡ, ಮರಾಠಿಗರ ನಡುವೆ ಸಾಹಿತ್ಯ, ಸಂಸ್ಕೃತಿಯ, ಸಾಂಸ್ಕೃತಿಕ ರಾಯಭಾರಿಯಾಗಿ ಕೆಲಸ ನಿರ್ವಹಿಸಿದರು.

ಮರಾಠರ ಸ್ನೇಹದಿಂದ ನಿಪ್ಪಾಣಿ ಭಾಗದಲ್ಲಿ ತಂಬಾಕಿನ ವ್ಯಾಪಾರ ಮತ್ತು ವ್ಯವಹಾರ ಮಾಡಲು ಅನುಕೂಲವಾಯಿತು. ಇದರಿಂದ ಸಂಗಣ್ಣನವರು ರಾಜ್ಯ, ಹೊರ ರಾಜ್ಯಗಳಲ್ಲಿ ವ್ಯಾಪಾರಕ್ಕಾಗಿ ತಿರುಗಾಡತೊಡಗಿದರು. ಆದರೆ ಚಿಗಟೇರಿಯ ಅಂಗಡಿಯಲ್ಲಿ ಈಶ್ವರಪ್ಪನವರೇ ಕುಳಿತು ವ್ಯವಹಾರ ಮಾಡ ತೊಡಗಿದರು. ನಿಪ್ಪಾಣಿ, ಕೊಲ್ಲಾಪುರದಿಂದ ಬಂದು ಹೋಗುವ ಖರೀದಿ ವ್ಯಾಪಾರಿಗಳ 'ಲಾರಿಗಳಿಗೆ' ಸಂದಾಯ ಮತ್ತು ಉದ್ರಿ ರೂಪದಲ್ಲಿ ಲೋಡ್ ಮಾಡಿ ಕಳುಯಿಸಲಾರಂಭಿಸಿದರು. ಈ ವ್ಯಾಪಾರದಿಂದ ನಾಗಪುರ, ಪಂಡರಾಪುರ ಮಹಾರಾಷ್ಟ್ರದ ಕಡೆ ಉತ್ತಮ ಸಂಪರ್ಕ ಸಾಧಿಸಿದರು.

**ಜನಪದ ಸಾಹಿತ್ಯ ಸಂಗ್ರಹ**

ಭಾರತ ದೇಶಕ್ಕೆ ಸ್ವಾತಂತ್ರ್ಯ ಬಂದ ನಂತರ ಮುದೇನೂರು ಸಂಗಣ್ಣನವರು ವ್ಯಾಪಾರ, ರೈತರ ಸಮಸ್ಯೆಗಳು ರಾಜಕೀಯ ಹಾಗೂ ಸಾಹಿತ್ಯದ ಕ್ಷೇತ್ರಗಳಲ್ಲಿ ಸಮಾಜ ಸೇವೆ ಮಾಡಿದರು. ಇವುಗಳನ್ನೊಳಗೊಂಡು ಸಾಹಿತ್ಯದ ವಿವಿಧ ಆಯಾಮಗಳನ್ನು ಗ್ರಹಿಸಿ, ಅವುಗಳನ್ನು ಸ್ವೀಕರಿಸುವ, ಪ್ರತಿಕ್ರಿಯಿಸುವ ಸಾಂಸ್ಕೃತಿಕ ಕಥನಗಳಲ್ಲಿ ತೊಡಗಿಸಿಕೊಂಡರು. ನಮ್ಮ ದೇಶಿಯ ನೆಲ ಸಂಸ್ಕೃತಿಗೆ ಹೆಸರಾದ ಬಯಲು ಸೀಮೆಯ ನಾಡಿನ, ಜನಪದರ ಮೌಖಿಕ ಸಾಹಿತ್ಯವನ್ನು ಸಂಗ್ರಹಿಸುವ, ಕಾರ್ಯಕ್ಕೆ ಸಂಗಣ್ಣನವರು ಮೊಟ್ಟ ಮೊದಲ ಬಾರಿಗೆ ಕ್ಷೇತ್ರಕ್ಕೆ ಇಳಿದರು. ಸಂಗ್ರಹಿಸಿ ಸಂಪಾದಿಸುವ ಕೆಲಸದಲ್ಲಿ ಯಶಸ್ಸು ಕಂಡರು. ಹಳ್ಳಿಯಲ್ಲಿ ಹಾಡುವ ವಿವಿಧ ಜಾನಪದ ಕಲಾ ಪ್ರಕಾರಗಳನ್ನು ಕ್ರೋಢಿಕರಿಸಿದರು. ಅದರಿಂದ ಹರಪನಹಳ್ಳಿ, ಕೊಟ್ಟೂರು, ಕೂಡ್ಲಿಗಿ, ಬಳ್ಳಾರಿಯಂತಹ ಸ್ಥಳಗಳಿಗೆ ಹೋಗಿ ಜನಪದ ಗೀತೆಗಳನ್ನು ಸಂಗ್ರಹಿಸಿದರು. ಹಳ್ಳಿಗಳಲ್ಲಿ ಹಾಡುವ ಕಥೆ. ಹಾಡು, ಒಗಟು, ಒಡಪು, ನಾಣ್ಣುಡಿ ಮುಂತಾದವುಗಳ ಮೂಲಕ ನೆಲ ಸಂಸ್ಕೃತಿಯ ಮೂಲವನ್ನು ಕಟ್ಟಿ ಕೊಟ್ಟರು.

ಯಾವುದೇ ತತ್ವ ಸಿದ್ಧಾಂತಗಳಿಗೆ ಒಳಗಾಗದೆ, ವಿಮರ್ಶೆ, ತೌಲನಿಕ ವಾದಗಳಿಗೆ ಮಾರು ಹೋಗದೆ, ಜಾನಪದರ ನೈಜ ಕಥೆಯನ್ನು ಸಂಗ್ರಹಿಸುತ್ತಾರೆ. ಹೊಲ ಗದ್ದೆಗಳಲ್ಲಿ ಹಾಡುವ 'ಜನಪದ, ಪದಗಳನ್ನು ಸಂಪಾದಿಸುತ್ತಾರೆ. ಮನೆಗಳಲ್ಲಿ ರಾಗಿ, ನವಣಿ, ಜೋಳ ಕುಟ್ಟುವಾಗ, ಬೀಸುವಾಗ ಸ್ತ್ರೀಯರು ಹಾಡುತ್ತಿದ್ದ ಪದಗಳನ್ನು ಸಂಗ್ರಹಿಸುತ್ತಾರೆ.

ಭಾರತೀಯ ಪರಂಪರೆ ಉಳಿಸುವ ಸಂಪ್ರದಾಯ ಕಾರ್ಯಕ್ರಮ ಪದ್ಧತಿಗಳಲ್ಲಿ ಹೇಳುವ ಹಾಡುಗಳನ್ನು ಸಂಪಾದಿಸುತ್ತಾರೆ. ಉದಾಹರಣೆಗೆ ಮದುವೆ, ಸ್ತ್ರೀ ಮೈ ನೆರೆಯುವುದು, ಒಸಗೆ ಹಾಕುವುದು. ಬಿತ್ತುವ ಸುಗ್ಗಿಯಿಂದ ಹಿಡಿದು ಕೊಯ್ಲು ಮಾಡುವ ವಿವಿಧ ಪ್ರಕಾರಗಳಲ್ಲಿ ಹಾಡುಗಳನ್ನು ಸಂಗ್ರಹಿಸುವ ಕೆಲಸ ಮಾಡಿದ್ದಾರೆ. ಉದಾಹರಣೆಗೆ ಬಿತ್ತುವ, ಎಡೆ ಅರಗುವ, ಕಳೆ ತೆಗೆಯುವ, ಹಗ್ಗ ಹೊಸೆಯುವ, ಕಣದಲ್ಲಿ ಹುಲ್ಲು ಬಡಿದು ಒಕ್ಕಲು ಮಾಡುವ ತನಕ ಹೇಳುವ ಪದಗಳ ಸಂಗ್ರಹ ಮಾಡಿರುವುದು ಸಂಗಣ್ಣನವರ ಬಹುದೊಡ್ಡ ಸಾಧನೆಯಾಗಿದೆ.

ಮನೆ ಮುಂದೆ ನಿಂತು ಭಿಕ್ಷಾ ಕೇಳುವ ಕಿನ್ನರಿ ಜೋಗಿಗಳ ಬೆನ್ನು ಹತ್ತಿ, ಸಹವಾಸ, ಸಂಪರ್ಕದಿಂದ "ಲಕ್ಷಾಪತಿ ರಾಜನ ಕಥೆ" ಸಂಗ್ರಹಿಸಿದ್ದಾರೆ. ಸಂಗ್ರಹ ಸಂಪಾದನೆ ಮೂಲಕ ನಾಟಕ ರಚನೆಗಳನ್ನು

ಮಾಡಿ, ಕಲಾವಿದರ ಮೂಲಕ ಪ್ರದರ್ಶಿಸಿದರು. ನಾಟಕದ ಸಂಚಾಲಕರಾಗಿ, ನಿರ್ದೇಶಕರಾಗಿ ಕಾರ್ಯನಿರ್ವಹಿಸಿದರು. ರಂಗ ಭೂಮಿಗೆ 'ಗೀತ ಸಂಗೀತ ನೃತ್ಯ' ಎಂಬ ಸಂಮಿಶ್ರ ಹೊಸ ಕಲೆಯನ್ನು ಪರಿಚಯಿಸಿ ಕೊಟ್ಟರು.

೧೯೬೫ರಲ್ಲಿ ಹರಪನಹಳ್ಳಿ ತಾಲ್ಲೂಕಿನ, ಮೈದೂರು ಎಂಬ ಊರಿನಲ್ಲಿ ಶಿವರುದ್ರಪ್ಪ ಎಂಬ ವ್ಯಕ್ತಿಯಿಂದ 'ಚಿತ್ರಪಟ ರಾಮಾಯಣ' ಎಂಬ ನಾಟಕವನ್ನು ಸಂಪಾದಿಸಿದರು. ಉಚ್ಚಂಗಿದುರ್ಗ ಹರಪನಹಳ್ಳಿಯಲ್ಲಿದ್ದ ಕಲಾವಿದರನ್ನು ಗುರುತಿಸಿ, ಅವರನ್ನು ಸಂದರ್ಶಿಸಿ ಹಲವು ಹಾಡು ಸಂಗತಿಗಳನ್ನು ಸಂಗ್ರಹಿಸಿದರು.

ಕೈ ಬರಹದ ಮೂಲಕ ಸಂಗ್ರಹಿಸಲು ಸಾಧ್ಯವಾಗದಿದ್ದಾಗ, ಆಧುನಿಕ ಉಪಕರಣವನ್ನು ಬಳಸಿ ಸಂಗ್ರಹಿಸುವ ಕುತೂಹಲಿಗಳಾಗಿದ್ದರು. "ಗ್ರೌಂಡಿಸ್ ಟೇಪ್ ರೆಕಾರ್ಡಿನ" ಸೌಲಭ್ಯದಿಂದ ಜನಪದರು ಹೇಳುವ ಗೀತೆಗಳನ್ನು ಸಂಗ್ರಹಿಸಿದರು. ಎಲ್ಲಾದರೂ ಜಾತ್ರೆ, ಉತ್ಸವ, ನಾಟಕ, ಪ್ರದರ್ಶನಗೊಳ್ಳುತ್ತಿದ್ದರೆ ಖಚಿತವಾದ ಮಾಹಿತಿ ಪಡೆದುಕೊಂಡು, ಅಲ್ಲಿಗೆ ಹೋಗಿ ಸಂಗ್ರಹಿಸುವ ಗುಣವನ್ನು ಹೊಂದಿದ್ದರು. ಯಾರಾದರೂ ಕಥೆ, ಗೀತನಾಟಕ, ಕಾವ್ಯವನ್ನು ಹೇಳುತ್ತಾರೆ ಎಂಬ ಸುಳಿವು ಸಿಕ್ಕರೆ, ಎತ್ತಿನ ಗಾಡಿ ಕಟ್ಟಿ ಅದರ ಮೇಲೆ ಟೇಪ್ ರೆಕಾರ್ಡ್, ಕ್ಯಾಸೆಟ್‌ಗಳನ್ನು ಹೇರಿ ಕೊಂಡು ಹೋಗಿ ಸಂಗ್ರಹಿಸುವ ಮನೋಧೋರಣೆ ಇತ್ತು. ಇದಕ್ಕಿಂತ ಮೊದಲು ಅಲ್ಲಿನ ಜನರಿಗೆ "ದ್ವನಿ ಸುರುಳಿಯನ್ನು ಹಾಕಿ ಕೇಳಿಸುವ ಮಾಹಿತಿಯನ್ನು ಒದಗಿಸುತ್ತಿದ್ದರು. ಹೀಗೆ ಆಧುನಿಕ ಉಪಕರಣ ಬಳಸಿ ದೇಶಿಯ ಸಾಹಿತ್ಯ ಕಥನಗಳನ್ನು ಸಂಗ್ರಹಿಸಿ ಸಂಪಾದಿಸಿದರು.

**ರಂಗಭೂಮಿಗೆಕೊಟ್ಟ ಕೊಡುಗೆ**

ಮುದೇನೂರು ಸಂಗಣ್ಣನವರು ಬಹುಮುಖ ಪ್ರತಿಭೆಯುಳ್ಳವರು. ಕರ್ನಾಟಕ ರಂಗಭೂಮಿಗೆ ಕೊಟ್ಟ ಕೊಡುಗೆ ಅನನ್ಯವಾದದ್ದು. ಕೇವಲ ಕಥೆ, ಕವಿತೆ, ಸಂಗ್ರಹ, ಸಂಪಾದನೆ, ಜೊತೆಗೆ ನಾಟಕ ರಚನೆಯನ್ನು ಅದ್ಭುತವಾಗಿ ಹೆಣೆದಿದ್ದಾರೆ. "ಸೂಳೆ ಸಂಕವ್ವೆ" ಅವಳ ಐದು ಸಾಲಿನ ಒಂದು ವಚನವನ್ನು ತೆಗೆದುಕೊಂಡು. ಅವಳ ಹುಟ್ಟು, ಬದುಕು, ಆದರ್ಶಗುಣ, ಸಾತ್ವಿಕ ಆಲೋಚನೆ, ಮಾನಸಿಕ ನೋವು, ದುಃಖ, ದುಮ್ಮಾನಗಳು, ಪುರುಷ ಪ್ರಧಾನ ವ್ಯವಸ್ಥೆಯಲ್ಲಿ ಸೂಳೆಯಾಗಿ ಬದಲಾವಣೆ ಇವುಗಳ ಪರಿಕಲ್ಪನೆಗಳನ್ನು ನಾಟಕ ರೂಪದಲ್ಲಿ ಎಳೆಎಳೆಯಾಗಿ ಬಿಚ್ಚಿಡಲಾಗಿದೆ.

"ಸೂಳೆ ಸಂಕವ್ವೆ" ಎಂಬ ನಾಟಕ ಅಷ್ಟೇ ಅಲ್ಲದೆ, ಅವ್ವಣ್ಣವ್ವೆ, ಶೀಲಾವತಿ, ಬಾಳಭಿಕ್ಷುಕ ಎಂಬ ನಾಟಕಗಳಲ್ಲಿ ಸ್ತ್ರೀಯರ ಸ್ಥಾನ ಮಾನ ಎತ್ತಿ ಹಿಡಿಯಲಾಗಿದೆ. ಪ್ರೀತಿ, ಮಮತೆ, ವಾತ್ಸಲ್ಯ, ವಿಧವಾ ವಿವಾಹ ಪದ್ಧತಿ, ಅಂತರ್ಜಾತಿ ವಿವಾಹ, ಸಾಮಾಜಿಕ ನ್ಯಾಯ ಮುಂತಾದ ಸಂಗತಿಗಳನ್ನು ನಾಟಕ ರೂಪದಲ್ಲಿ ಪ್ರದರ್ಶನ ಮಾಡಿ, ಸಂದೇಶ ಕೊಡುವ ಮೂಲಕ ಸಾಮಾಜಿಕ ಅವ್ಯವಸ್ಥೆಯನ್ನು ಬದಲಿಸುವಲ್ಲಿ ಪ್ರಯೋಗಶೀಲರಾದರು.

ಪ್ರತಿಯೊಂದು ನಾಟಕಗಳು ಭಿನ್ನ ನೆಲೆಯಲ್ಲಿ ನಿರೂಪಣೆಗೊಂಡಿವೆ. ಆದರೆ ನಾಟಕಗಳ ವಿಚಾರ ಧಾರೆಗಳು, ಜನಪದರ, ದೇಶಿಯ ನೆಲೆ ಮತ್ತು ಸಂಸ್ಕೃತಿ, ವೈಚಾರಿಕತೆಯನ್ನು ಬಿತ್ತರಿಸುತ್ತವೆ. ಗ್ರಾಮೀಣ ಪ್ರದೇಶದ ಜನರ ಮುಖಾಮುಖಿ ಜೀವನ ಮತ್ತು ಸಂವಹನ ಮಾಧ್ಯಮದ ಕೊಡುಗೆಯಾಗಿ ನಾಟಕಗಳನ್ನು ರಚಿಸಿ, ಸಂಗ್ರಹಿಸಿ ಸಂಪಾದಿಸಿದ್ದಾರೆ.

ಜಾನಪದ ಸಂಗ್ರಹ ಸಂಪಾದನೆ ಜೊತೆಗೆ "೧೯೪೫ರಿಂದ ೨೦೦೦ರವರಗೆ ರಚಿಸಿದ ಕವಿತೆಗಳನ್ನು ಒಟ್ಟು ಗೂಡಿಸಿ 'ಆ ಅಜ್ಜ ಈ ಮೊಮ್ಮಗ' ಎಂಬ ಕವನ ಸಂಕಲನವನ್ನು ಪ್ರಕಟಿಸಿದರು. ಹರಪನಹಳ್ಳಿ, ಬಳ್ಳಾರಿ, ದಾವಣಗೆರೆಯ ಸಾಂಸ್ಕೃತಿಕ ಕಾರ್ಯಕ್ರಮಗಳಲ್ಲಿ ಭಾಗವಹಿಸಿ, ಕವಿ ಗೋಷ್ಠಿಗಳನ್ನು ಏರ್ಪಡಿಸಿ, ಕವಿತೆಗಳನ್ನು ವಾಚನ ಮಾಡಿ ರಸಿಕರಿಗೆ ಸಹೃದಯರಿಗೆ ಕೊಟ್ಟ ಕೊಡುಗೆಯು ಒಂದಾಗಿದೆ.

ಮುದೇನೂರು ಸಂಗಣ್ಣನವರು ಬಹು ಭಾಷೆಗಳನ್ನು ಕಲಿತರು. ಪರಂಪರಾಗತವಾಗಿ ಬಂದ ಕನ್ನಡ ಭಾಷೆಯ ಜೊತೆಗೆ ತೆಲುಗು, ಮರಾಠಿ, ಬಂಗಾಳಿ ಭಾಷೆಗಳನ್ನು ಸರಳವಾಗಿ ಓದಲು, ಬರೆಯಲು, ಮಾತನಾಡಲು, ಕಲಿತರು. ಬಂಗಾಳಿ, ಮರಾಠಿ, ತೆಲುಗು ಭಾಷೆಯ ನಾಟಕಗಳನ್ನು ಕನ್ನಡಕ್ಕೆ ಅನುವಾದ ಮಾಡಿದರು. ಇದರಿಂದ ಕನ್ನಡಿಗರು ಸಹ ಬಂಗಾಳಿ, ಮರಾಠಿ ಸಾಹಿತ್ಯದ ಸವಿಯನ್ನು ಉಂಡರು.

### ಸ್ನೇಹದ ಬೆಸುಗೆ

ಮುದೇನೂರು ಸಂಗಣ್ಣನವರು ಯಾವುದೇ ಅಧಿಕಾರಿದಾಹಿಗಳಲ್ಲ. ಅಧಿಕಾರದ ಕುರ್ಚಿಯಲ್ಲಿ ಕುಳಿತಿರುವ ಶಿಕ್ಷಕರು, ವರ್ಗದಾರರು ವಕೀಲರ ಸ್ನೇಹ ಬಾಂಧವ್ಯವನ್ನು ಸಂಪಾದಿಸಿದ್ದರು. ಉತ್ತರ ಕರ್ನಾಟಕಕ್ಕಿಂತ ದಕ್ಷಿಣ ಕರ್ನಾಟಕದ ಸಾಹಿತಿಗಳ ಒಡನಾಟವಿತ್ತು. ಕಡಲ ತೀರದ ಭಾರ್ಗವ ಎನಿಸಿದ್ದ ಶಿವರಾಮ ಕಾರಂತರ ಒಡನಾಟ ತೀರ ಹತ್ತಿರವಾದದ್ದು. ಏಕೆಂದರೆ, ಬಳ್ಳಾರಿ, ಕೊಟ್ಟೂರು ಕಡೆಗೆ ಬಂದರೆ ಚಿಗಟೇರಿಯ ಸಂಗಣ್ಣನವರ ಮನೆಗೆ ಬಂದು ಹೋಗುತ್ತಿದ್ದರು. ಅವರಿಗಾಗಿ ಗೊಂಬೆ ಆಟಗಳನ್ನು ಉಪನ್ಯಾಸಗಳನ್ನು ಏರ್ಪಡಿಸುವಷ್ಟರ ಮಟ್ಟಿಗೆ ಸ್ನೇಹ ಬೆಳೆದಿತ್ತು.

ರಂಗ ಕರ್ಮಿ ಕೆ.ವಿ. ಸುಬ್ಬಣ್ಣ ಅವರಿಗೆ ಮ್ಯಾಗ್ಸೆಸೆ ಪ್ರಶಸ್ತಿ ಬಂದಾಗ ಸ್ನೇಹದ ಪ್ರತೀಕವಾಗಿ, ತಮ್ಮ ಮನೆಗೆ ಗೆಳೆಯರೆಲ್ಲರನ್ನು ಕರೆಯಿಸಿ "ಸಂಗೀತ ಕಾರ್ಯಕ್ರಮ" ಏರ್ಪಡಿಸಿ, ಹೋಳಿಗೆ ಊಟ ಹಾಕಿಸಿ, ತನಗೆ ಬಂದಷ್ಟೇ ಸಂತೋಷವನ್ನು ವ್ಯಕ್ತಪಡಿಸಿದರು.

ಮತ್ತೋರ್ವ ರಾಜಕೀಯ ಮುತ್ಸದ್ಧಿ ಎಂ.ಪಿ. ಪ್ರಕಾಶ ಅವರೊಂದಿಗಿನ ಸ್ನೇಹ ಒಬ್ಬರನ್ನೊಬ್ಬರು ಬಿಟ್ಟಿರಲಾರದಷ್ಟು ಬೆಳೆದಿತ್ತು. ನಾಟಕ, ಸಿನಿಮಾ ನೋಡುವುದಾದರೆ ಜೊತೆಗೆ ಹೋಗುತ್ತಿದ್ದರು. ಯಾವುದೇ ಹೊಸ ವಿಷಯ ಓದಿದರೆ ಮೊದಲು ಎಂ.ಪಿ.ಪ್ರಕಾಶ್‌ರ ಜೊತೆ ಚರ್ಚಿಸುತ್ತಿದ್ದರು. ವ್ಯಾಪಾರ, ರಾಜಕೀಯ, ಸಾಹಿತಿಗಳ ಸ್ನೇಹ ಸಂಬಂಧವು ಮುಂದಿನ ಯುವ ಪೀಳಿಗೆಗೆ ಮಾದರಿಯಾಗಿದೆ.

## ಸಾಂಸ್ಕೃತಿಕ ನಾಯಕರಾಗಿ ಮುದೇನೂರು ಸಂಗಣ್ಣ

ಗ್ರಾಮೀಣಾ ಪ್ರದೇಶಗಳಲ್ಲಿ ಹಲವಾರು ಬಗೆಯ ಕಲಾ ಪ್ರತಿಭೆಗಳು ಇದ್ದರು. ಅವರೆಲ್ಲರೂ ವಿವಿಧ ವೃತ್ತಿ ಕಾಯಕದಲ್ಲಿ ತೊಡಗಿದ್ದರು. ಮೊದಲು ವೃತ್ತಿ ಕಾಯಕದ ಪ್ರತಿಭೆಗಳನ್ನು ಗುರುತಿಸಿ ಅವರಿಗೆ ಒಂದು ವೇದಿಕೆ ನಿರ್ಮಿಸಿದರು ಅದರಿಂದ ಬದುಕಿನ ವಾಸ್ತವತೆಯನ್ನು ಕಟ್ಟಿ ಕೊಟ್ಟರು. ಆ ವೇದಿಕೆಯಲ್ಲಿ ವೃತ್ತಿಗಾರರ ಕಲೆಯನ್ನು ಪ್ರದರ್ಶಿಸಿ, ಅವರ ಪ್ರತಿಭೆಗಳನ್ನು ಸಾಹಿತ್ಯ ಪ್ರಕಾರಗಳಾಗಿ, ಜಾನಪದೀಯ ಅಂಶಗಳಾಗಿ ಹೊರ ಹೊಮ್ಮಿದವು. ಅವುಗಳೆಂದರೆ ಮಂಡರು, ದೊಂಬಿದಾಸರು, ಜೋಗಿಗಳು, ಹೆಳವರು, ಲಂಬಾಣಿಗಳು, ಗೊರವರು, ಗೊಂದಲಿಗರು, ಚೌಡಿಕೆಯವರು, ಬುಡುಬುಡಿಕೆ, ಕರಪಾಲಕರು ಮುಂತಾದವರು "ಅಪ್ಪಟ ದೇಶಿಯ ಕಲಾ ಪ್ರತಿಭೆ"ಯುಳ್ಳವರು ಈ ಕಲಾ ವೃತ್ತಿಯೇ ಜೀವನದ ದಾರಿ ದೀಪವು ಹೌದು ಆದುದರಿಂದ ಕಲಾವಿದರ ಬದುಕನ್ನು ಸಂಗಣ್ಣನವರು ಕಟ್ಟಿ ಕೊಟ್ಟಿದ್ದಾರೆ.

ಪ್ರಾದೇಶಿಕ ರಂಗ ಕಲೆಗಳ ಅಧ್ಯಯನ ಕೇಂದ್ರದ ಸಲಹೆಗಾರರಾಗಿ ಸುದೀರ್ಘಕಾಲ ಉಡುಪಿಯಲ್ಲಿ ಸೇವೆಗೈದರು. ನಂತರ ಕನ್ನಡ ವಿಶ್ವವಿದ್ಯಾನಿಲಯದ ಮೊದಲ ಸೆನೆಟ್ ಸದಸ್ಯರಾಗಿ, ಸಲಹೆಗಾರರಾಗಿ ಕಾರ್ಯ ನಿರ್ವಹಣೆ ಹಾಗೂ ಕನ್ನಡ ವಿಶ್ವವಿದ್ಯಾಲಯದ ಕಟ್ಟಡಗಳು ವಿಜಯನಗರ ಶೈಲಿಯಲ್ಲಿಯೇ ನಿರ್ಮಾಣವಾಗಬೇಕು. ದೇಶಿ ಪರಂಪರೆಯಲ್ಲಿಯೇ ರೂಪುಗೊಳ್ಳಬೇಕು ಮುಂತಾದ ಸಹಕಾರ ಸಲಹೆಗಳನ್ನು ನೀಡಿದರು.

ಕನ್ನಡ ವಿವಿಯ ಮೊದಲ ಕುಲಪತಿ ಡಾ.ಚಂದ್ರಶೇಖರ ಕಂಬಾರ ಅವಧಿಯಲ್ಲಿ ಕಟ್ಟಡ ಸಮಿತಿಯ ಅಧ್ಯಕ್ಷರಾದರು. ಕರ್ನಾಟಕ ಜಾನಪದ ಪರಿಷತ್ತಿನ ಕಾರ್ಯಕಾರಿ ಮಂಡಳಿಯ ಸದಸ್ಯರಾಗಿ, ಕಲಾವಿದರ ಏಳಿಗೆಗಾಗಿ ಶ್ರಮಿಸಿದರು.

ಎಂ.ಪಿ. ಪ್ರಕಾಶರೊಂದಿಗೆ ಹಡಗಲಿಯಲ್ಲಿ ರಂಗಭಾರತಿ "ಸಾಂಸ್ಕೃತಿಕ ಸಂಸ್ಥೆಯನ್ನು ಸ್ಥಾಪನೆ ಮಾಡಿದರು" ಹೊಸಪೇಟೆ ತಾಲೂಕಿನ ಮರಿಯಮ್ಮನಹಳ್ಳಿಯ "ಲಲಿತ ಕಲಾ ರಂಗದ" ಗೌರವ ನಿರ್ದೇಶಕರಾಗಿ ಸಂಪನ್ಮೂಲ ವ್ಯಕ್ತಿಯಾಗಿ ರಾಷ್ಟ್ರ ಮಟ್ಟದಲ್ಲಿ ಆಸಕ್ತಿಯನ್ನು ಬೆಳೆಸಿದರು. ಹೊಸದುರ್ಗ ತಾಲ್ಲೂಕಿನ ಸಾಣೆಹಳ್ಳಿ ತರಳಬಾಳು ಮಠದ ಶಿವ ಸಂಚಾರ ರಂಗ ಕೇಂದ್ರದಲ್ಲಿ ಸೇವೆ ಸಲ್ಲಿಸಿದ್ದಾರೆ."[೭]

## ಮುದೇನೂರು ಸಂಗಣ್ಣನವರ ವ್ಯಕ್ತಿತ್ವ

ತಲಾ ತಲಾಂತರವಾಗಿ ಬಂದ ಐಶ್ವರ್ಯ, ಸಂಪತ್ತು ಮನೆಯಲ್ಲಿ ಇದೆ. ಅವುಗಳಿಂದ ದೂರವಿದ್ದು ಸರಳ ಜೀವಿಯಾಗಿ ಬದುಕಿದರು. ಎಲ್ಲ ಜನರೊಂದಿಗೆ ಸಮನ್ವಯ ಸಹಕಾರದಿಂದ ನಡೆದುಕೊಳ್ಳುತ್ತಿದ್ದರು. ಚಿಕ್ಕವರು, ದೊಡ್ಡವರನ್ನದೆ ಅವರ ಹೆಗಲ ಮೇಲೆ ಕೈ ಹಾಕಿ ಒಳ್ಳೆಯ ದಾರಿಯನ್ನು ತೋರಿಸುತ್ತಿದ್ದರು. ಶಿವರಾಮ ಕಾರಂತರ "ಸಹಬಾಳ್ವೆಯೇ ಜೀವನ" ಎಂಬ ತತ್ವವನ್ನು ಪಾಲಿಸುತ್ತಿದ್ದರು. ರೈತರಿಗೆ ವ್ಯಾಪಾರದಲ್ಲಿ ಆಗುವ ಅನ್ಯಾಯ ಕಂಡು ತಾವೇ ತಕ್ಕಡಿಯ ಚುಕ್ಕಾಣಿ ಹಿಡಿದು ನ್ಯಾಯ ಒದಗಿಸಿದರು. ಕನ್ನಡ ಭಾಷೆ ನೆಲಕ್ಕಾಗಿಯೇ ಹೋರಾಡಿದರು. ಹೃದಯ ಸಂಬಂಧ ಚಿಕಿತ್ಸೆಗೆ ಒಳಗಾದರೂ ಸಾಹಿತ್ಯ

ಸಂಗ್ರಹಕ್ಕಾಗಿ ಬದುಕಿನ ಉದ್ದಕ್ಕೂ ದುಡಿದರು. ಸಮಾಜ ಮುಖಿಯಾಗಿ ಮಾನವೀಯ ಮೌಲ್ಯವನ್ನು ತನ್ನ ಕೃತಿಗಳಲ್ಲಿ ಕಟ್ಟಿಕೊಟ್ಟರು.

ಮಹಾನ್ ಜಾನಪದ ವಿದ್ವಾಂಸ ತನ್ನ ದೇಹವನ್ನು ವೈದ್ಯಕೀಯ ವಿದ್ಯಾರ್ಥಿಗಳಿಗೆ ಉಪಯೋಗವಾಗಲು ದಾನ ಮಾಡಿದನು. ಇಂತಹ ಸಾತ್ವಿಕ ಮನಸ್ಸುಳ್ಳ ಸಂಗಣ್ಣನವರು 'ಹೃದ್ರೋಗ, ಲೋಬೀಪಿಯಿಂದ ೨೬ ಅಕ್ಟೋಬರ್ ೨೦೦೮ರಂದು ನಿಧನರಾದರು.

**೨.೧ ಮುದೇನೂರು ಸಂಗಣ್ಣನವರ ಸಂಕ್ಷಿಪ್ತ ಕೃತಿಗಳ ಪರಿಚಯ**

ಬಯಲು ಸೀಮೆಯ ನಾಡಲ್ಲಿ ಬೆಳೆದ ಮುದೇನೂರು ಸಂಗಣ್ಣನವರ ಜ್ಞಾನ ಅಪಾರವಾದದ್ದು. ಹರಪನಹಳ್ಳಿ ತಾಲ್ಲೂಕಿನ. ಚಿಗಟೇರಿ ಗ್ರಾಮದಲ್ಲಿ ಬೆಳೆದು ಬಂದ ಇವರು ಹಲವಾರು ಕೃತಿಗಳನ್ನು ರಚಿಸಿದ್ದಾರೆ. ಅದರಲ್ಲಿ ಹೆಚ್ಚು ಕೃತಿಗಳು ಜಾನಪದ ಸಾಹಿತ್ಯಕ್ಕೆ ಸಂಬಂಧಿಸಿದ್ದವು ಇವರದು ಬಹುಮುಖ ಪ್ರತಿಭೆ ಬರಹದ ಕೃಷಿ ಹಲವು ಕ್ಷೇತ್ರಗಳಲ್ಲಿ ಫಲವಂತವಾಗಿ ಬಂದಿದೆ. ಕಾವ್ಯ ಸಾಹಿತ್ಯ, ಜನಪದ, ರಂಗನಾಟಕಗಳು ಸಂಪಾದನೆ ಭಾಷಾಂತರ, ಜೀವನ ಚರಿತ್ರೆ ಹೀಗೆ ಹಲವು ಕ್ಷೇತ್ರಗಳಲ್ಲಿ ಬರವಣಿಗೆ ಮಾಡಿದ್ದಾರೆ. ಇವೆಲ್ಲವುಗಳಿಗಿಂತ ಮುಖ್ಯವಾಗಿ ಅವರ ವಿದ್ವತ್ತಿಗೆ ಗೌರವ ತಂದಿದ್ದು "ಚಿಗಟೇರಿ ಪದಕೋಶ" ಎನ್ನುವ ಭಾಷಾ ನಿಘಂಟು. ಇದು ಚರಿತ್ರೆಯಲ್ಲಿ ಸುವರ್ಣಾಕ್ಷರದಲ್ಲಿ ಬರೆದಿಡಬೇಕಾದ ಸಂಪತ್ಭರಿತ ಕೃತಿಯಾಗಿದೆ.

ಮೊಟ್ಟ ಮೊದಲ ಬಾರಿಗೆ ೧೯೪೫ರಲ್ಲಿ 'ಬೆನ್ನ ಹಿಂದಿನ ಬೆಳಕು' ಎಂಬ ಕವನ ಸಂಕಲನವನ್ನು ಶಾಂತರಸರು ಸಂಪಾದಿಸಿದರು. ಈ ಕವನ ಸಂಕಲನದಲ್ಲಿ ಮುದೇನೂರು ಸಂಗಣನವರ ಹೆಚ್ಚಿನ ಕವಿತೆಗಳು ಪ್ರಕಟಗೊಂಡಿವೆ. ಅಲ್ಲದೆ ಬಹುತೇಕ ಕವಿತೆಗಳು 'ಜಯಂತಿ' ಪತ್ರಿಕೆಯಲ್ಲಿ ಪ್ರಕಟಗೊಂಡಿದ್ದವು. ಜನಪದ ಆಸಕ್ತಿಯ ಕ್ಷೇತ್ರವಾಗಿದ್ದರಿಂದ, ಜಾನಪದ ಸಾಹಿತ್ಯದ ಕಡೆಗೆ ೧೯೪೬ರಲ್ಲಿ ಹೋಗಲು ಕಾರಣವಾಯಿತು. ಇದಕ್ಕೆ ಮತ್ತೊಂದು ಪ್ರಮುಖ ಕಾರಣ, ಪ್ರೇರಣೆ ಎಂದರೆ, 'ಹಲಸಂಗಿ ಗೆಳೆಯರ' ಗುಂಪು, 'ಗರತಿಯ ಹಾಡು' ಸ್ಫೂರ್ತಿದಾಯಿಕವಾದವು.

ಮೇಲಿನ ಎಲ್ಲಾ ಕಾರಣಗಳಿಂದ, ಹಳ್ಳಿ, ಊರು, ಕೇರಿಗಳೆನ್ನದೆ ಅಲೆದಾಡಿ, ಜಾನಪದ ತ್ರಿಪದಿಗಳನ್ನು, ನಾಟಕಗಳನ್ನು, ಸಂಗ್ರಹಿಸಿ ಸಂಪಾದಿಸಿದರು. ಇದು ಅವರ ವಿದ್ವಥ್ ಹಾಗೂ ಅಪಾರ ಪರಿಶ್ರಮಕ್ಕೆ ಸಾಕ್ಷಿಯಾಗಿದೆ. ಸಂಗಣ್ಣನವರ ಒಟ್ಟು ಕೃತಿಗಳನ್ನು ಸಂಕ್ಷಿಪ್ತವಾಗಿ ಈ ಅಧ್ಯಾಯದಲ್ಲಿ ಪರಿಚಯಿಸಲಾಗಿದೆ.

೧. ಮುದೇನೂರು ಸಂಗಣ್ಣನವರ ಸಾಹಿತ್ಯಿಕ ಕೃತಿ ಜನಪದ ಮುಕ್ತಕಗಳು, ಅಲ್ಲಮ ಪ್ರಭುವಿನ ಬೆಡಗಿನ ವಚನಗಳಿಗಿಂತ ವಿಶಿಷ್ಟವಾದದ್ದು. ಈ ಮುಕ್ತಕಗಳು ಹೊಸ ಬಗೆಯಲ್ಲಿ ರಚನೆಯಾಗಿವೆ. ಜಾನಪದರ ಜೀವನ, ವಿಧಾನ, ಚಿಂತನೆ, ವ್ಯಕ್ತಿ, ಕುಟುಂಬ ಸಮಾಜಗಳ ನಡುವಿನ ಸಂಬಂಧಗಳ ಮನೋಗ್ರಹಿಕೆಯನ್ನು ವಿವರಿಸುತ್ತವೆ. ಜಾನಪದರ ವೃತ್ತಿ, ಜಾತಿ, ಮತ, ವರ್ಗ, ಪಂಗಡಗಳನ್ನೆಲ್ಲಾ ತೊರೆದು ಮಾನವ ಕಾಳಜಿಯನ್ನು ಬಿತ್ತರಿಸುತ್ತವೆ.

ಪ್ರೀತಿ, ವಿಶ್ವಾಸ, ಕರುಣೆ, ಪ್ರೇಮ, ಸಹಬಾಳ್ವೆ, ನೀತಿ, ನಿಯಮಗಳ ನಡುವಿನ ಬದುಕನ್ನು ಕಟ್ಟಿ ಕೊಡುತ್ತವೆ. ಮನುಷ್ಯನ ಸಹಕಾರ ಮನೋಭಾವನೆಯ ಗುಣಗಳನ್ನು ಗೌರವವನ್ನು ಸೂಚಿಸುತ್ತವೆ. ಮುಕ್ತಕಗಳ ಸ್ವರೂಪದಲ್ಲಿ ಹಳ್ಳಿಯ ಜೀವನ, ವೃತ್ತಿ, ಆಚರಣೆ, ಸಂಪ್ರದಾಯ, ಸಂಸ್ಕೃತಿ, ಜಾನಪದರ ಗ್ರಾಮ್ಯ ಬದುಕಿನ ನಂಬಿಕೆಯನ್ನು ಎಕ್ಕಿ ತೆಗೆಯಲಾಗಿದೆ.

ಕುರಿ, ಹಾಡು, ಹಸು, ಎತ್ತು, ಕೃಷಿಕರ ಭೂಮಿ, ಬೆಳೆದ ಬೆಳೆ, ಇವುಗಳ ನಡುವಿನ ಭಾವನಾತ್ಮಕ ಸಂಬಂಧಗಳ ಚಿತ್ರಣ ಇದೆ. ಮುಕ್ತಕಗಳು ಸ್ವತಂತ್ರ ಸ್ವರೂಪವುಳ್ಳದ್ದು, ಅದರದೇ ಆದ ವಿಸ್ತಾರ ವ್ಯಾಪ್ತಿಯನ್ನು ಹೊಂದಿದೆ. ಗಾತ್ರದಲ್ಲಿ ಕಿರಿದು, ಪ್ರಭಾವದಲ್ಲಿ ಹಿರಿದು, ಹಾಗಾಗಿ ನಿರಂತರವಾದ ಚಲನ ಶೀಲವುಳ್ಳವು. ಒಂದು ಬಗೆಯ ವಚನಗಳ ಮಾದರಿವುಳ್ಳವು ಒಂದು ಬಗೆಯಲ್ಲಿ 'ಬೆಲ್ಲದ ಪುತ್ಥಳಿಗಳು' ಯಾವ ಮೂಲೆ ತಿಂದರೂ ಅದರ ರುಚಿ ಹಾಗೆಯೇ ಇರುತ್ತದೆಯೋ ಈ ಮುಕ್ತಕಗಳ ಗುಣವು ಹಾಗೆ ಉಳಿದುಕೊಂಡಿದೆ.

೨. ಮುದೇನೂರು ಸಂಗಣ್ಣನವರು ೧೬ಕ್ಕೂ ಅಧಿಕ ಜನಪದ ರಂಗ ನಾಟಕಗಳನ್ನು ನೀಡಿದ್ದಾರೆ. ಒಂದೊಂದು ನಾಟಕವು ನೂರಕ್ಕೂ ಹೆಚ್ಚು ಪ್ರಯೋಗಗೊಂಡಿವೆ. ಕೆಲವು ನಾಟಕಗಳು ರಾಜ್ಯ ಮತ್ತು ಹೊರ ರಾಜ್ಯಗಳಲ್ಲಿ ಪ್ರದರ್ಶನಗೊಂಡಿವೆ.

**ಚಿತ್ರಪಟ ರಾಮಾಯಣ**– ಭಾರತೀಯ ರಾಮಾಯಣ ಪರಂಪರೆಗೆ ಹೊಸ ತಿರುವುಗಳನ್ನು ತಂದ ಮಹತ್ವದ ಕೃತಿ. ಈ ನಾಟಕ ಆಕರ್ಷಕ ನಿರೂಪಣೆ ನೀಡುವ ಜನಪದ ಸಂಗ್ರಹ ಮತ್ತು ಸಂಪಾದಿತ ಕೃತಿಯಾಗಿದೆ. ಹರಪನಹಳ್ಳಿ ತಾಲ್ಲೂಕಿನ ಮೈದೂರುನಲ್ಲಿರುವ ಶಿವರುದ್ರಪ್ಪ ಎಂಬುವರಿಂದ ೧೯೬೫ರಲ್ಲಿ ಸಂಗ್ರಹಿಸಿ ಸಂಪಾದಿಸಿದ್ದಾರೆ. ಮುದೇನೂರು ಸಂಗಣ್ಣನವರು ಈ ನಾಟಕವನ್ನು ದೊಡ್ಡಾಟ ಎಂದೇ ಕರೆದಿದ್ದಾರೆ. ಮೈದೂರು ಶಿವರುದ್ರಪ್ಪ ಮೂಲತಃ ಯಕ್ಷಗಾನ ಭಾಗವತರಾಗಿದ್ದರು.

ಹರಪನಹಳ್ಳಿ, ಹಗರಿ, ಹರಿಹರ, ಕೂಡ್ಲಿಗಿ ಈ ಸುತ್ತಿನಲ್ಲಿ ಖ್ಯಾತಿ ಪಡೆದಿದ್ದರು. ಯಕ್ಷಗಾನ ಭಾಗವತರ ಬಳಿ ಇದ್ದ ಚಿಕ್ಕ ಹಸ್ತಪ್ರತಿಯ ಸಹಾಯ ಹಾಗೂ ಭಾಗವತರ ಕಥೆಯನ್ನು ವಿಸ್ತರಿಸಿದ ರೂಪವೇ ಚಿತ್ರಪಟ ರಾಮಾಯಣ. ಚಿತ್ರಪಟ ರಾಮಾಯಣದಲ್ಲಿ ಸೀತೆ ಮತ್ತು ರಾವಣರ ಪರಸ್ಪರ ಸಂಬಂಧ ಆತ್ಮೀಯತೆಯನ್ನು ಹೇಳುತ್ತದೆ. ಸೀತೆಗೆ ರಾವಣನಲ್ಲಿ ಅನುರಾಗ ವಿತ್ತೆಂಬುದನ್ನು ನಾಟಕ ನಿರೂಪಿಸುತ್ತದೆ.

ಒಬ್ಬ ಭಿಕ್ಷುಕ ಸೀತೆಯ ಮನೆಯ ಮುಂದೆ ನಿಂತು ಭಿಕ್ಷೆ ಕೇಳುವುದು. ಸೀತೆ ತಡವಾಗಿ ಬರುತ್ತಿದ್ದಾಳೆ. ಏಕೆ? ಎಂಬುದನ್ನು ಭಿಕ್ಷುಕ ಗಮನಿಸುವ ಪ್ರಸಂಗವಿದೆ. ರಾಮನನ್ನು ನೋಡಿ ಸೀತೆಯು ಚಿತ್ರಪಟ ರಾಮಾಯಣವನ್ನು ಮಂಚದ ಕೆಳಗಡೆ ಕಾಣದಂತೆ ಇಡುವುದು. ರಾಮ ಮಂಚದ ಮೇಲೆ ಕುಳಿತಾಗ ಮಂಚ ಮುರಿದು ಬೀಳುವುದು ಅಲ್ಲಿ ಚಿತ್ರಪಟ ರಾಮಾಯಣ ರಾಮನ ಕಣ್ಣಿಗೆ ಬಿತ್ತು ಆಗ ರಾವಣನ ದೃಶ್ಯವನ್ನು ರಾಮ ಕಂಡು ಬೆರಗಾದನು.

ಆಗ ರಾಮನು ರಾವಣನ ದೃಶ್ಯವನ್ನು ಕಂಡು ಸೀತೆಯು ರಾವಣನನ್ನು ಪ್ರೀತಿಸುತ್ತಿದ್ದಾಳೆ. ಅವನ ಮೇಲಿನ ವ್ಯಾಮೋಹ, ಅವಳ ಮನಸ್ಸಿನಿಂದ ಹೋಗಿಲ್ಲ. ಅವನಲ್ಲಿ ಅನುರಕ್ತಳಾಗಿದ್ದಾಳೆ. ಎಂದು ಕಲ್ಪಿಸಿಕೊಳ್ಳುತ್ತಾನೆ.

ಈ ಮೇಲಿನ ಎಲ್ಲಾ ಕಾರಣಗಳಿಂದ ಸೀತೆಯು ಕಾಡಿಗೆ ಹೋಗಿ, ಋಷಿಮುನಿಯ ದರ್ಶನ ಪಡೆಯಲಿ ಎಂದು ರಾಮ ಆಜ್ಞಾಪಿಸುವ ಕಥಾವಸ್ತುವೆ ಚಿತ್ರಪಟದ ರಾಮಾಯಣದ ಕಥನವಾಗಿದೆ. ಈ ನಾಟಕ ಜೈನ ಮತ್ತು ವಾಲ್ಮೀಕಿ ರಾಮಾಯಣಕ್ಕೂ ಭಿನ್ನವಾಗಿ ಕಂಡು ಬರುತ್ತದೆ. ಜೈನ ರಾಮಾಯಣದಲ್ಲಿ ಸೀತೆ ರಾವಣನ ಮಗಳು. ಹಾಗಾಗಿ ರಾಮ-ರಾವಣರ ಯುದ್ಧ ಸಾತ್ವಿಕ ತನದಿಂದ ಕೂಡಿದೆ. ಇನ್ನೂ ವಾಲ್ಮೀಕಿ ರಾಮಾಯಣ ಪರಂಪರೆಯಲ್ಲಿ ರಾವಣನು ಸೀತೆ ಎಂಬ ಹೆಣ್ಣನ್ನು ಪ್ರೀತಿಸುತ್ತಾನೆ. ಆದರೆ ರಾಮನ ಆತ್ಮೀಯ ಸಂಗಾತಿ, ಸುಂದರ ರೂಪದವಳು, ಇವಳ ಸೌಂದರ್ಯಕ್ಕೆ ಮಾರು ಹೋಗಿ ರಾವಣ ಸೀತೆಯನ್ನು ಅಪಹರಿಸುತ್ತಾನೆ. ಈ ಕಾರಣದಿಂದ ರಾಮ ರಾವಣರ ನಡುವೆ ಯುದ್ಧ ನಡೆಯುತ್ತದೆ. ಕೊನೆಗೆ ಹನುಮಂತನು ಲಂಕೆಗೆ ಬೆಂಕಿ ಇಟ್ಟು ರಾವಣನನ್ನು ಸಂಹರಿಸಿ ಸೀತೆಯನ್ನು ಸೆರೆಯಿಂದ ಬಿಡಿಸಿಕೊಂಡು ಬರುವ ಪ್ರಸಂಗವಿದೆ.

"ಚೌತಿಯ ಚಂದ್ರ", "ಬಂಗಾರದ ತಟ್ಟೆ", "ಜನ ಅರಣ್ಯ" ಮುಂತಾದ ನಾಟಕಗಳು ಸಮಕಾಲೀನ ಸಂದರ್ಭದ ಆಶಯಗಳಿಗೆ ಹತ್ತಿರವಾಗಬಲ್ಲವು. ಸಾಂಸ್ಕೃತಿಕ ಚೌಕಟ್ಟಿನೊಳಗೆ ಸಾರ್ವತ್ರಿಕ ಮೌಲ್ಯ ಬಿತ್ತುವ ಅತ್ಯುತ್ತಮ ಪಠ್ಯಗಳು ರಂಗ ರೂಪಗಳಾಗಿಯೂ ಹೆಸರು ಮಾಡಿವೆ. "ಚೌತಿ ಚಂದ್ರಮ" ನಾಟಕವು ಪ್ರಗತಿಪರ ಧೋರಣೆಯನ್ನು ಹೊಂದಿದೆ.

'ಮೋಚಿ ಮಾಮ' ಎಂಬ ನಾಟಕವು ತಳವರ್ಗದ, ಅಲಕ್ಷಿತ ಸಮುದಾಯದವರ ಬಡತನದ ಬೇಗೆಯಲ್ಲಿ ಬೆಂದವರ ದಲಿತ ಸಂವೇದನೆಯನ್ನು ವಿವರಿಸುತ್ತದೆ. ಸಮಾಜದ ಮೇಲಿನ ಕಾಳಜಿ ದಲಿತರಿಗೂ ಇದೆ, ಎಂಬುದನ್ನು ನಾಟಕದಲ್ಲಿ ನೋಡುತ್ತೇವೆ. ದಲಿತ ಸಂವೇದನೆಯ ಅಂತಕರುಣೆಯ ಮೌಲಿಕ ಜೀವನದ ಒಳ ನೋಟಗಳನ್ನು ಕುಳವಾಡಿಗಳು, ಕೈವಾಡದವರು ನಿರೂಪಿಸಿದ್ದಾರೆ.

'ಮನುಷ್ಯ ಜಾತಿ ತಾನೊಂದೆ ವಲಂ' ಎಂಬಂತೆ, ಶ್ರೀಮಂತ ವರ್ಗದಿಂದ ಬಂದರೂ, ಮುದೇನೂರು ಸಂಗಣ್ಣನವರು ಅಲಕ್ಷಿತ ಸಮಾಜದ ನಡುವಿನ ಬಾಂಧವ್ಯಗಳ ಹಿತವನ್ನು ಬಯಸಿದವರು. ಸಾಮಾಜಿಕ ಕಾಳಜಿಯನ್ನು ಅರ್ಥಪೂರ್ಣವಾಗಿ ಅರ್ಥೈಸಿಕೊಳ್ಳಲು ಈ ನಾಟಕ ಯಶಸ್ವಿಯಾಗಿದೆ.

"ಮೋಚಿ ಎಂಥ ದಲಿತ ಜನಾಂಗದ ಜಾಡು ಮಾಲಿಯನ್ನು ಕುವೆಂಪು ಜಲಗಾರ ಎಂದು ಕರೆದರೆ ಮುದೇನೂರು ಸಂಗಣ್ಣ 'ಮಾಮ' ಎಂಬ ಅಕ್ಕರೆಯ ವಿಶೇಷಣದೊಂದಿಗೆ ಮೋಚಿ ವೃತ್ತಿ ಸೂಚಕ ಕೂಡಿಸಿಯೇ 'ಮೋಚಿ ಮಾಮ' ಎಂದು ಕರೆದಿದ್ದಾರೆ.

'ಸೂಳೆ ಸಂಕವ್ವೆ' ಹನ್ನೆರಡನೆ ಶತಮಾನದ ವಚನಕಾರರಲ್ಲಿ ಇವಳು ಒಬ್ಬಳು ಸಾತ್ವಿಕತನದಿಂದ ಬದುಕಬೇಕೆಂಬ ಕನಸನ್ನು ಕಂಡವಳು. ಸಮಾಜವನ್ನು ಬಿಟ್ಟು ಬದುಕಲು ಸಾಧ್ಯವಿಲ್ಲವೆಂಬಂತೆ ಮಾನವ ಸಂಘ ಜೀವಿಯಾಗಿ, ಅವರೊಂದಿಗೆ ಬದುಕಬೇಕು. ಎಂಬ ಸಿದ್ಧಾಂತವನ್ನು ಹೊಂದಿದವಳು. ಎಲ್ಲರಂತೆ

ತಾನು ಸಾಧ್ವಿಯಾಗಿ ಬಾಳಬೇಕು. ತನ್ನ ಜೀವನವನ್ನು ರೂಪಿಸಿಕೊಳ್ಳಬೇಕೆಂಬ ಸ್ವಾಭಿಮಾನವುಳ್ಳವಳು. ಕೊನೆಗೆ ವ್ಯವಸ್ಥೆಗೆ ಸಿಕ್ಕು ಸೂಳೆಯಾಗಿ ಬದುಕುವ ಪರಿಸ್ಥಿತಿ ಒದಗಿ ಬರುತ್ತದೆ. ಅವಳ ಬದುಕಿನ ಬದಲಾವಣೆಯು ಮಾನಸಿಕ ನೋವು, ದುಃಖ, ಯಾತನೆ, ದುಮ್ಮಾನಗಳಿಗೆ ಈ ನಾಟಕ ಎಡೆಮಾಡಿ ಕೊಡುತ್ತದೆ.

ಸೂಳೆ ಸಂಕವ್ವೆ ಶೋಷಣೆಗೊಳಪಟ್ಟ ಕೆಳಜಾತಿಯ ಹೆಣ್ಣು. ಇಂತವಳು ಹನ್ನೆರಡನೆಯ ಶತಮಾನದ ಅನುಭವ ಮಂಟಪದ ಗೋಷ್ಠಿಯಲ್ಲಿ ಬಾಗವಹಿಸಿದ್ದಳು. ಅವಳ ವಚನದ ಅಂಕಿತನಾಮ ನಿರ್ಲಜ್ಜೇಶ್ವರಾ ಒಂದೇ ಒಂದು ವಚನ ಪ್ರಕಟವಾಗಿದೆ.

"ಒತ್ತೆಯ ಹಿಡಿದು ಮತ್ತೊತ್ತೆಯ ಹಿಡಿಯೆ
ಹಿಡಿದರೆ ಬತ್ತಲೆ ನಿಲ್ಲಿಸಿ ಕೊಲುವರಯ್ಯಾ
ವ್ರತಹೀನನರಿದು ಬೆರೆದೆಡೆ
ಕಾದ ಕತ್ತಿಯಲ್ಲಿ ಕೈ ಕಿವಿ ಮೂಗ ಕೊಯ್ವರಯ್ಯಾ
ಒಲ್ಲೆ ನೊಲ್ಲೆ ಬಲ್ಲೆಯಾಗಿ ನಿಮ್ಮಾಣೆ ನಿರ್ಲಜ್ಜೇಶ್ವರ"[೮]

ಮೇಲಿನ ಒಂದೇ ವಚನವನ್ನು ಆಧರಿಸಿ ಮುದೇನೂರು ಸಂಗಣ್ಣ ನಾಟಕ ರಚಿಸಿರುವುದು ಐತಿಹಾಸಿಕ ಮಹತ್ವ ಪಡೆದುಕೊಂಡಿದೆ. ಈ ಎಲ್ಲ ಸಂಗತಿಗಳೇ ನಾಟಕದ ಕಥಾ ವಸ್ತುವಾಗಿ ಪ್ರಯೋಗಗೊಂಡಿದೆ. ಮುಖ್ಯವಾಗಿ ಬಸವಣ್ಣನ ಕಾಯಕ ಪ್ರಜ್ಞೆಯನ್ನು ಮೈಗೂಡಿಸಿಕೊಂಡಿದ್ದಾಳೆ. ವೇಶ್ಯೆಯಾದರೂ ಸರಳ ಬದುಕನ್ನು ನಡೆಸಿದವಳು. ಆ ಕ್ಷೇತ್ರದ ನೋವನ್ನು ತನ್ನ ಮನಸ್ಸಿನಲ್ಲಿಯೇ ಅನುಭವಿಸಿದಳು. ಕ್ರಿಯಾ ರೂಪದಲ್ಲಿಯೇ ಈ ನಾಟಕದ ಸಂಭಾಷಣೆ ನಿರೂಪಿತವಾಗಿದೆ. ೨೦೦೧ರಲ್ಲಿ ಈ ನಾಟಕಕ್ಕೆ ಕರ್ನಾಟಕ ಸಾಹಿತ್ಯ ಅಕಾಡೆಮಿ ಬಹುಮಾನ ದೊರೆತಿದೆ.

'ಅಂಗುಲಿಮಾಲ' ನಾಟಕವು ರಾಕ್ಷಿಸತನದ ವ್ಯಕ್ತಿಯ ವ್ಯಕ್ತಿತ್ವವನ್ನು ಹೇಳುತ್ತದೆ. ಅಂಗುಲಿಮಾಲ ಒಬ್ಬ ನರಭಕ್ಷಕ ಮನುಷ್ಯರ ರಕ್ತವನ್ನು ಕುಡಿದು ಬದುಕುತ್ತಾನೆ. ನೋಡುಗರಿಗೆ ಭಯಾನಕವಾಗಿ ಕಾಣುತ್ತಾನೆ. ಹೆಸರೆ ಸೂಚಿಸುವಂತೆ ಇವನೊಬ್ಬ ಕ್ರೂರಿ, ಬುದ್ಧನ ಶಿಷ್ಯರಲ್ಲಿ ಇವನೊಬ್ಬ, ಮನುಷ್ಯರ ಕೈ ಬೆರಳನ್ನು ಕತ್ತರಿಸಿ ಕೊರಳಿಗೆ ಮಾಲೆಯನ್ನಾಗಿ ಮಾಡಿಕೊಂಡು ಹಾಕಿಕೊಳ್ಳುತ್ತಿದ್ದನು. ಇಂತಹ ವ್ಯಕ್ತಿಗೆ ಒಮ್ಮೆ ಬುದ್ಧನ ಸಂದರ್ಶನವಾಗುತ್ತದೆ. ಬುದ್ಧನ ಉಪದೇಶದಿಂದ ಮನಸ್ಸು ಪರಿವರ್ತನೆ ಹೊಂದುತ್ತಾನೆ ಎಂಬುದೇ ಈ ನಾಟಕದ ಸಂದೇಶ. ಈ ಪರಿವರ್ತನೆಯಿಂದ ಜಾತಿ, ಮತ, ಲಿಂಗ, ಸಂಬಂಧಗಳನ್ನು ತೊರೆದು ಬುದ್ಧನ ಸಿದ್ಧಾಂತ ಪಾಲಿಸುತ್ತಾನೆ. ಎಂತಹ ಕ್ರೂರ ವ್ಯಕ್ತಿಯಾದರು ಬುದ್ಧನ ಪವಾಡಕ್ಕೆ ತಲೆಬಾಗಲೆ ಬೇಕು ಎಂಬುದು ಈ ನಾಟಕದ ತಾತ್ವಿಕತೆ.

'ಶೀಲಾವತಿ' ಇದೊಂದು ಜಾನಪದ ನಾಟಕ. ಕಾವ್ಯ ಪ್ರಸಂಗದಲ್ಲಿ ಶೀಲಾವತಿ ಕಾಣಿಸಿಕೊಳ್ಳುತ್ತಾಳೆ. ಗೊಂದಲಿಗರ ಕಥಾ ಪ್ರಸಂಗದ ನಾಟಕ ರೂಪಾಂತರವಾಗಿದೆ. ಸಂಗೀತ ಮತ್ತು ನೃತ್ಯಕ್ಕೆ ಹೆಸರುವಾಸಿಯಾದ ನಾಟಕ, ಗೊಂದಲಿಗರ ಕಥಾ ಪರಂಪರೆಯನ್ನು ನಿರೂಪಣೆಯ ದಾಟಿಯಲ್ಲಿ, ಎಳೆ, ಎಳೆಯಾಗಿ

ಬಿಚ್ಚಿಕೊಳ್ಳುತ್ತದೆ. ನಾಟಕ ಹಾಡುಗಬ್ಬವಾದುದ್ದು ಜನರ ಮನಸ್ಸಿನಲ್ಲಿ ಉಳಿದು ಕೊಂಡಿದೆ. ಈ ರೀತಿಯ ಕಥಾ ಹಂದರ ಬೆಳೆದಿದೆ.

ಈ ನಾಟಕವು ರಾಜ್ಯ ಮತ್ತು ಹೊರ ರಾಜ್ಯಗಳಲ್ಲಿ ನೂರಕ್ಕೂ ಹೆಚ್ಚು ಪ್ರದರ್ಶನಗೊಂಡಿದೆ. ಜಾನಪದರ ಆಧುನಿಕ ನಾಟಕವಾಗಿ ಪರಿವರ್ತನೆಗೊಂಡಿದೆ. ಎರಡು ನಮೂನೆಯಲ್ಲಿ ನಾಟಕ ರೂಪುಗೊಂಡಿದೆ. ಒಂದು ಜಾನಪದ ಕಥಾವಸ್ತುವಾಗಿ ಬಳಸಿಕೊಳ್ಳಲು, ಆಕಾರ ಮತ್ತು ವಸ್ತು ಎರಡನ್ನು ದುಡಿಸಿಕೊಳ್ಳಲಿಕ್ಕೆ ಅವಕಾಶ ಮತ್ತು ಸ್ವಾತಂತ್ರ್ಯವಿದೆ ಮಾತು, ಕಥೆ, ಅಭಿನಯದ ಜೊತೆಗೆ ದೃಶ್ಯದ ಕಡೆಗೆ ಹೆಚ್ಚಿನ ಒತ್ತು ಕೊಡಬೇಕಾಗಿದೆ.

'ಅವ್ವಣ್ಣೆವ್ವ' ನಾಟಕವು ಜನಪದ ಗೀತೆಯನ್ನಾಧರಿಸಿದೆ. ಒಂದು ಹಳ್ಳಿಯ ಅಂತರ್ಜಾತಿಯ ಪ್ರೇಮ ಕಥೆಯ ಜೊತೆಗೆ ವಿವಿಧ ಆಯಾಮವನ್ನು ಪಡೆದುಕೊಳ್ಳುತ್ತದೆ. ಅವ್ವಣೆವ್ವ ಬಡವನಾದ ದಲಿತಜಾತಿಯ ಯುವಕನನ್ನು ಪ್ರೀತಿಸುತ್ತಾಳೆ. ಅದಕೊಪ್ಪದ ಅಣ್ಣಂದಿರು ತನ್ನ ಕುಲದ ಹುಡುಗನಿಗೆ ಮದುವೆ ಮಾಡಿಸುತ್ತಾರೆ. ವಿಧಿವಶದಿಂದ ಗಂಡನು ಅಲ್ಪಾಯುಸ್ಸಿಯಾಗಿ ಸಾಯುತ್ತಾನೆ. ಅವ್ವಣ್ಣೆವ್ವ ತರುಣಿ, ಗಂಡನನ್ನು ಕಳೆದುಕೊಂಡು ವಿಧವೆಯಾಗುತ್ತಾಳೆ. ಇವಳ ಮೊದಲ ಪ್ರೇಮಿ ಮದುವೆಯಾಗಿ ಮರು ಜೀವನ ಕೊಡುತ್ತಾನೆ. ಅವರಿಬ್ಬರ ಪ್ರೇಮ ಜೀವನ ದಿಕ್ಕರಿಸಿದ ಊರನ್ನು ಬಿಟ್ಟು ಕಾಡಿಗೆ ಹೋಗುತ್ತಾರೆ.

ಅಲ್ಲಿ ಮಗುವಿಗೆ ಜನ್ಮ ನೀಡಿದ ಮೇಲೆ ಕಾಡು ಜೀವನ ಬೇಸರವಾಗುತ್ತದೆ. 'ಮಾನವ' ಸಂಘ ಜೀವಿಯಂತೆ ಬದುಕಬೇಕು. ಸಮಾಜವನ್ನು ಬಿಟ್ಟು ಬದುಕಲು ಸಾಧ್ಯವಿಲ್ಲವೆಂಬಂತೆ ಪುನಃ ಹಳ್ಳಿಗೆ ಬರುತ್ತಾರೆ.

'ಲಕ್ಷಾಪತಿ ರಾಜನ ಕಥೆ'ಯು ಕಿನ್ನರಿ ಜೋಗಿಗಳ ಕಥಾ ಪ್ರಸಂಗವನ್ನು ವಿವರಿಸುತ್ತದೆ. ಈ ನಾಟಕವನ್ನು ಮುದೇನೂರು ಸಂಗಣ್ಣನವರು ಹಿರಿಯ ರಂಗ ಕರ್ಮಿ ಜಾನಪದ ತಜ್ಞ ಡಾ. ಚಂದ್ರಶೇಖರ ಕಂಬಾರರೊಂದಿಗೆ ಸಂಪಾದಿಸಿದ್ದಾರೆ. ಕಿನ್ನರಿ ಜೋಗಿಗಳ ರಂಜನೀಯ ವೃತ್ತಿ ಜನ್ಮ ಕಥೆಗಾರಿಕೆಯ ತಂತ್ರವನ್ನು ಬಳಸಿಕೊಳ್ಳಲಾಗಿದೆ. ಮೂಲ ಕಲೆಯ ಶೈಲಿ ಸತ್ವಗಳನ್ನು ಹಾಡಿನ ದಾಟಿಗಳನ್ನು ಉಳಿಸಿಕೊಂಡು ಕಥಾವಸ್ತುವನ್ನು ಇನ್ನಷ್ಟು ಪುಷ್ಟಿಗೊಳಿಸಿ ಪ್ರದರ್ಶನ ಮಾಡಲಾಗಿದೆ. ಈ ನಾಟಕವು ಬಿ.ಜಯಶ್ರೀ ನೇತೃತ್ವದಲ್ಲಿ ಉತ್ತಮರಂಗ ಪ್ರಯೋಗವಾಗಿ ದೂರದರ್ಶನದಲ್ಲಿ ಪ್ರಸಾರವಾಗಿ ಜನಮನವನ್ನು ತಲುಪಿದೆ.

'ಬುದ್ಧಬಾಲ' ನಾಟಕವು ಬುದ್ಧನ ಚಾರಿತ್ರ್ಯ ವಧೆಗೆ, ವೈದಿಕರೊಂದಿಗೆ ಜೈನರೂ ಕೈ ಜೋಡಿಸಿದ್ದು, ನಾಟಕದ ಕಥಾವಸ್ತು ಈ ನಾಟಕವನ್ನು ಸಾಣೇಹಳ್ಳಿಯ 'ಶಿವಸಂಚಾರ' ತಂಡ ಪ್ರಯೋಗಿಸಿದೆ.

ಯಾವುದೇ ಒಂದು ನಾಟಕವು ಯಶಸ್ವಿಗೊಳ್ಳಬೇಕಾದರೆ, ಪ್ರಮುಖವಾಗಿ, ನಾಟಕಕಾರ, ನಿರ್ದೇಶಕ, ಕಲಾವಿದ ಮತ್ತು ಪ್ರೇಕ್ಷಕರನ್ನು ಅವಲಂಬಿಸಿರುತ್ತದೆ. ನಿರ್ದೇಶಕ ಮತ್ತು ನಾಟಕಕಾರ ಸೂಕ್ಷ್ಮ ಬುದ್ಧಿವಂತಿಕೆಯಿಂದ ಪರಸ್ಪರ ಒಬ್ಬರಿಗೊಬ್ಬರು ಭಾವನೆಗಳನ್ನು ಅರ್ಥಮಾಡಿಕೊಳ್ಳಬೇಕು ಇಲ್ಲದಿದ್ದರೆ

ನಾಟಕ ಪ್ರದರ್ಶನವು ವಿಫಲವಾಗುತ್ತದೆ. ಈ ಎಲ್ಲಾ ಅಂಶಗಳನ್ನೊಳಗೊಂಡು ಬಾಳ ಭಿಕ್ಷುಕ ನಾಟಕವು ವೈಶಿಷ್ಟತೆಯಿಂದ ಯಶಸ್ವಿಯಾಗಿದೆ.

ಈ ನಾಟಕದಲ್ಲಿ ತಾಂತ್ರಿಕ ಬುದ್ಧಿವಂತಿಕೆಯಿಂದ ವೈವಿಧ್ಯಮಯ ರಂಗ ತಂತ್ರ ಬಳಕೆಯಾಗಿದೆ. ಭೂತ ಮತ್ತು ವರ್ತಮಾನ ಕಾಲಗಳ ಕಥೆ ಹೆಣೆಯಲಾಗಿದೆ. ನಮ್ಮ ಭಾರತೀಯ ಸಂಪ್ರದಾಯದ ಪ್ರಕಾರ ಒಂದು ಹೆಣ್ಣಿಗೆ ಮದುವೆಯಾದ ಮೇಲೆ ಅವಳಿಗೆ ಎಷ್ಟೇ ಕಷ್ಟ ಕಾರ್ಪಣ್ಯ ಬಂದರೂ ಸಹ ತವರು ಮನೆ ಮತ್ತು ಗಂಡನ ಮನೆಯವರಿಗೆ ಕಂಟಕ ಬರದ ಹಾಗೆ ಗೌರವ ತಂದು ಕೊಡುವುದು ಹೆಣ್ಣಿನ ಕರ್ತವ್ಯ.

ಪುರೋಹಿತಶಾಹಿಗಳು ತಮ್ಮ ಬುದ್ಧಿ ಚಾತುರ್ಯದಿಂದ ಜನರನ್ನು ನಂಬಿಸುವ ಮೌಢ್ಯ ಬಾಳ ಭಿಕ್ಷುಕ ನಾಟಕದಲ್ಲಿದೆ. ಕಾಶಿಗಿರಿಯ ಸಾವಚಿತ್ತ ಎಂಬ ಮಹಾರಾಜರಿಗೆ ಬಹುವರ್ಷಗಳ ನಂತರ ಗಂಡು ಮಗುವಿಗೆ ಜನನ ನೀಡುತ್ತಾರೆ. ಮಗು ಹುಟ್ಟಿದ ಸಂಭ್ರಮಕ್ಕೆ ಇಡೀ ಊರಿಗೆ ಊರೆ ಸಂತೋಷ ಪಡುತ್ತಿರುವಾಗ, ಒಬ್ಬ ಜ್ಯೋತಿಷಿಯು ಇವನ ಜನ್ಮದಲ್ಲಿ ದೋಷವಿದೆ. ಮಗು ಹುಟ್ಟಿ ೨೧ ದಿನಗಳೊಳಗೆ ತಂದೆ–ತಾಯಿಗಳು ಸಾಯುತ್ತಾರೆ ಎಂದು ಶಕುನ ನುಡಿಯುತ್ತಾರೆ. ಅದಕ್ಕೆ ಪರಿಹಾರವಾಗಿ ಹುಟ್ಟಿ ೨೧ ದಿನಗಳೊಳಗೆ ಮಗುವಿಗೆ ಮದುವೆ ಮಾಡಬೇಕು ಹೀಗೆ ಹೇಳಿ ಮಗುವಿಗೆ 'ಬಾಳ ಭಿಕ್ಷುಕ' ಎಂದು ನಾಮಕರಣ ಮಾಡುತ್ತಾರೆ.

ಭದ್ರಾವತಿ ಪಟ್ಟಣದ ಭದ್ರ ಸೇನ ಮಹಾರಾಜ ದಂಪತಿಗಳ ಮಗಳು ಪದ್ಮಾವತಿಯೆಂಬ ಕನ್ಯೆಯ ಜೊತೆಗೆ ಮೋಸದಲ್ಲಿ ಮದುವೆ ಮಾಡುತ್ತಾರೆ. ಇನ್ನೂ ದಿಬ್ಬಣಕ್ಕೆ ಹೊರಟಾಗ ಕತ್ತಲಾಯ್ತು ಎಂದು ಹೇಳಿ ಕಾಡಿನಲ್ಲಿಯೇ ತಂಗುವ ನಟನೆ ಮಾಡಿ, ಪದ್ಮಾವತಿ ಮತ್ತು ಹಸುಗೂಸನ್ನು ಬಿಟ್ಟು ಎಲ್ಲರೂ ಕಾಶಿಗಿರಿಗೆ ಹೋಗುತ್ತಾರೆ. ಪದ್ಮಾವತಿಗೆ ಎಚ್ಚರವಾದಾಗ ಅಲ್ಲಿ ಯಾರು ಇಲ್ಲದಿದ್ದನ್ನು ಕಂಡು, ಪಕ್ಕದಲ್ಲಿ ಮಗುವೊಂದೆ ಇರುವುದನ್ನು ನೋಡಿ, ಸತ್ಯಾ ಸತ್ಯತೆಯನ್ನರಿತು ಮಗುವನ್ನು ಕೊಲ್ಲಲೆತ್ನಿಸಿ ವಿಫಲಳಾಗುತ್ತಾಳೆ. ಒಬ್ಬ ಮುದುಕಜ್ಜನಿಂದ ಮಾರ್ಗದರ್ಶನ ಪಡೆದು ಭಾರತೀಯ ನಾರಿಧರ್ಮವನ್ನು ಕಾಪಾಡಬೇಕು. ನಂತರ ಕುಂಟಲಗಿತ್ತಿಯ ಸಂಗವ್ವನ ಆಶ್ರಯ ಪಡೆಯುತ್ತಾರೆ.

ಈ ನಾಟಕದಲ್ಲಿ ಪದ್ಮಾವತಿಯು ಹದಿಹರೆಯದ ತರುಣಿ ತನ್ನ ಆಸೆ, ಆಕಾಂಕ್ಷೆಗಳನ್ನು, ತುಮುಲಗಳನ್ನು ಹೇಗೆ ಹಿಡಿದಿಟ್ಟುಕೊಂಡಳು. ಗಂಡನಾದ ಬಾಳ ಭಿಕ್ಷುಕ ದೊಡ್ಡವನಾಗುವವರೆಗೆ ಅವಳ ಇಂದ್ರಿಯಾಸಕ್ತಿ ಕೆರಳಿಸಲಿಲ್ಲವೆ. ಇವಳ ಸೌಂದರ್ಯಕ್ಕೆ ಮಾರು ಹೋದ ಸಹಪಾಠಿಗಳು ಇವಳನ್ನು ಕೆಣಕಲು ಹೋಗಿ ಬಾಳ ಭಿಕ್ಷುಕನಿಂದಲೇ ಕೊಲ್ಲಲ್ಪಡುತ್ತಾರೆ. ಬಾಳ ಭಿಕ್ಷುಕ ಬೆಳೆದು ದೊಡ್ಡವನಾದ ಮೇಲೆ ಮುದುಕಜ್ಜನ ಮಾರ್ಗಸೂಚಿಯಂತೆಯೇ ಪದ್ಮಾವತಿಯ ಜೊತೆಗೆ ಸಂಸಾರ ನಡೆಸುತ್ತಾನೆ. ಹೀಗೆ ನಾಟಕದ ಕಥಾ ಹಂದರ ಬೆಳೆಯುತ್ತದೆ.ಹಸುಗೂಸಿನ ಜೊತೆಗೆ ಒಬ್ಬ ತರುಣಿಯನ್ನು ಮದುವೆ ಮಾಡುವುದಾದರೆ. ಇದು ಸಮಾಜಕ್ಕೆ ವಿರೋಧವಲ್ಲವೆ. ನಾಟಕದಲ್ಲಿ ಪ್ರಯೋಗ ಮಾಡಿ ತೋರಿಸಬಹುದೆ ವರತು ಸಮಾಜದಲ್ಲಿ ಈ ರೀತಿಯ ನಡೆದ ಘಟನೆ ಇದೆಯೇ ಎಂಬುದು ಪ್ರಶ್ನೆಯಾಗಿಯೇ ಉಳಿಯುತ್ತದೆ.

'ರಸದಾಳ ರಾಜನ ಕಥೆ' ಬಯಲು ಸೀಮೆಯ ಪನ್ನಿತಿರಕಪ್ಪ ಈ ಕಥೆಯನ್ನು ಹೇಳುತ್ತಾನೆ. ಅವನು ಹೇಳುವ ಸಂಗ್ರಹ ಕೃತಿಯಾಗಿದೆ. ರಸದಾಳರಾಜ ಒಬ್ಬ ರಾಜನ ಕಥೆ ನಾಲ್ಕು ಗುಂಟೆ ಎನ್ಯಾಕ್ಟ ಮಾಡದು, ಹಾಡೋದು, ಮಾತು ಮುಂತಾದ ಮನಸ್ಸಿನ ವಿಚಾರಧಾರೆಗಳು ಈ ಕಥೆಯೊಳಗೆ ಬರುತ್ತವೆ.

ಬಿಂಬಸಾರನ ರಾಣಿ ಖೇಮಾಳ ನಾಟಕ ರಚಿಸಲು ಟಿಪ್ಪಣಿಯನ್ನು ಸಿದ್ಧಪಡಿಸಿದ್ದರು. ಇದನ್ನು ಪ್ರಾರಂಭಿಸಬೇಕೇನ್ನುವಷ್ಟರಲ್ಲಿ ಮುದೇನೂರು ಸಂಗಣ್ಣನವರ ಪ್ರಾಣ ಪಕ್ಷಿ ಹಾರಿತ್ತು.

**ಭಾಷಾಂತರ ಕೃತಿಗಳು**

ಬಯಲು ಸೀಮೆಯ ಸಂಗಣ್ಣನವರು ಭಾಷೆಯ ತೊಡಕಿರುವಾಗಲೇ ಹಲವಾರು ಭಾಷೆಗಳನ್ನು ಕಲಿತು ಕನ್ನಡಕ್ಕೆ ತರ್ಜುಮೆ ಮಾಡಿದ್ದಾರೆ. ಬಂಗಾಳಿ, ಮರಾಠಿ, ಇಂಗ್ಲೀಷ್, ಹಿಂದಿ, ಭಾಷೆಗಳನ್ನು ಮಾತೃ ಭಾಷೆ ಕನ್ನಡದಂತೆ ಮಾತನಾಡಬಲ್ಲವರು. ತಂಬಾಕು ವ್ಯಾಪಾರಕ್ಕಾಗಿ ನಿಪ್ಪಾಣಿಗೆ ಹೋಗಿ ಬರುವ ಸಂಪರ್ಕದಿಂದ ಮರಾಠಿ ಭಾಷೆಯನ್ನು ಕಲಿತರು. ಸುಭೋದ್ ಘೋಷರ ಕಥಾ ಪ್ರಭಾವಕ್ಕೊಳಗಾಗಿ ಬಂಗಾಳಿ ಭಾಷೆಯನ್ನು ಕಲಿತರು ಸುಭೋದ್ ಘೋಷರ ೧೮ ಕಥೆಗಳನ್ನು ಕನ್ನಡಕ್ಕೆ ಅನುವಾದಿಸಿದರು.

ರವೀಂದ್ರನಾಥ ಠಾಗೂರವರ ಬಂಗಾಳಿ ಕೃತಿಗಳನ್ನು ಮೂಲದಲ್ಲಿಯೇ ಓದಿಕೊಂಡಿದ್ದರು. ಬಂಗಾಳಿ , ಮರಾಠಿ ಭಾಷೆಯನ್ನು ಕಲಿತದ್ದು ವ್ಯಾಪಾರ ವ್ಯವಹಾರಕ್ಕಷ್ಟೆ ಸೀಮಿತಗೊಳಿಸದೆ ಸಾಹಿತ್ಯ, ಸಂಗೀತದ ಕಡೆ ಮಾರು ಹೋದರು ಆರ್ಥಿಕ ವ್ಯಾಪಾರ ಲಾಭಕ್ಕಿಂತ, ಮರಾಠಿ ಸಾಹಿತ್ಯ ಒಲವು ಹೆಚ್ಚಾಯಿತು. ಮರಾಠಿ ಗೆಳೆಯರ ಜೊತೆ ಒಡನಾಟವಿಟ್ಟುಕೊಂಡಿದ್ದರಿಂದ ಸಾಹಿತ್ಯದ ಗುಂಗು ಹಿಡಿಯಿತು.

ಬಂಗಾಳಿ ಕೃತಿಗಳಾದ ಭಾರತದ ಪ್ರೇಮ ಕಥೆಗಳು, ಕಥಾವೋಕಾಯಿಸಿ, ಏಕದಾ ನಿಶಾಥ್ ಕಾಲೆ ಮುಂತಾದವುಗಳನ್ನು ಕನ್ನಡಕ್ಕೆ ಅನುವಾದಿಸಿದರು.

ಮರಾಠಿಯಿಂದ ವಿಜಯ ತೆಂಡೂಲ್ಕರವರ ಘಾಶೀರಾಮ ಕೊತ್ವಾಲ್ ಎಂಬ ಪ್ರಸಿದ್ಧ ನಾಟಕವನ್ನು ಕನ್ನಡಕ್ಕೆ ಅನುವಾದಿಸಿದರು.

ಅನ್ಯ ಭಾಷಾ ನಾಟಕಗಳಾದ ಮುರಾದ್‌ರಾಮ್, ವಾಸನಕಾಂಡ ಮುಂತಾದ ಕೃತಿಗಳನ್ನು ಕನ್ನಡಕ್ಕೆ ಅನುವಾದಿಸಿದ್ದಾರೆ.

**ಕಾವ್ಯ** ಆ ಅಜ್ಜ ಈ ಮೊಮ್ಮಗ– ೧೯೪೫ರಿಂದ ೨೦೦೦ರ ವರೆಗೆ ಬಿಡಿ ಕವಿತೆಗಳನ್ನು ಒಟ್ಟು ಸೇರಿಸಿ ಪ್ರಕಟಿಸಿದ ಕವನ ಸಂಕಲನವಾಗಿದೆ. ಮುದೇನೂರು ಸಂಗಣ್ಣನವರ ಆಯ್ದ ಕವಿತೆಗಳ ಸಂಕಲನ. ಈ ಸಂಕಲನಕ್ಕೆ ಚಾರಿತ್ರಿಕ ಮಹತ್ವವನ್ನು ಪಡೆದುಕೊಂಡಿದೆ. ಬಸವಣ್ಣ, ಗಾಂಧಿ, ಅರವಿಂದ, ಲೋಹಿಯಾ, ಅಂಬೇಡ್ಕರ್ ಮುಂತಾದವರ ವಿಚಾರಧಾರೆಗಳು ಈ ಕವನ ಸಂಕಲನದಲ್ಲಿ ಕಂಡು ಬರುತ್ತದೆ.

ನವೋದಯ, ಪ್ರಗತಿಶೀಲ, ನವ್ಯ, ದಲಿತ, ಬಂಡಾಯ ಪ್ರಕಾರಗಳ ಧೋರಣೆಗಳು ಕವಿತೆಗಳ ಮೇಲೆ ಪ್ರಭಾವ ಬೀರಿವೆ. ಹೆಚ್ಚು ನವೋದಯ ಧೋರಣೆಗಳೇ ಕಾಣಿಸಿಕೊಳ್ಳುತ್ತವೆ. ಈ ಕವನ ಸಂಕಲನ ಬದುಕಿನ ಸಾಂಸ್ಕೃತಿಕ ಸಂಕಥನ ಮತ್ತು ಸಂಸ್ಕೃತಿಯ ಇತಿಹಾಸದ ಹೆಜ್ಜೆ ಗುರುತನ್ನು ಸಾರುತ್ತದೆ.

ಈ ಕವನ ಸಂಕಲನದಲ್ಲಿ ದಲಿತ ಪರ ಚಿಂತನೆ, ಸ್ತ್ರೀಯರ ಮೇಲೆ ಇರುವ ಗೌರವ, ಮಾತೃ ಪ್ರೀತಿ, ಸಮಾನತೆ, ಶೋಷಣೆ ಮಾಡುವವರ ಮೇಲೆ ಸಿಟ್ಟಿನ ಆಕ್ರೋಶವನ್ನು ವ್ಯಕ್ತಪಡಿಸುವ ಧ್ವನಿ ಇದೆ. ಅನ್ಯಾಯ ಮಾಡುವವರ ಮೇಲೆ ಉಗ್ರವಾದ ಕೋಪ, ವಿರೋಧ ಇದೆ. ಈ ಪರಿಕಲ್ಪನೆಗಳೇ ಸಂಗಣ್ಣನವರ ಕವಿತೆಗಳ ಸ್ಥಾಯಿಭಾವವಾಗಿದೆ.

ಕುವೆಂಪು, ಬೇಂದ್ರೆ, ಶಿವರಾಮಕಾರಂತ, ಬಿ.ಎಂ. ಶ್ರೀಯವರಂತೆ ಸಂಗಣ್ಣನವರು ನಿಸರ್ಗ ಪ್ರೇಮಿ ಕವನ ಸಂಕಲನದಲ್ಲಿ ನಿಸರ್ಗ ಮತ್ತು ಅನ್ವೇಷಣೆಯ ವರ್ಣನೆ ಇದೆ. ಲೌಖಿಕ ಹಾಗೂ ಅಲೌಖಿಕ ಬದುಕಿನ ಭಾವನೆಗಳನ್ನು ಅಭಿವ್ಯಕ್ತಪಡಿಸುತ್ತಾರೆ. ಭಾವುಕತನದಲ್ಲಿ ಮಗ್ನರಾಗುವುದಿಲ್ಲ.

ಬದುಕಿನ ವಾಸ್ತವತೆಯ ವ್ಯಾಖ್ಯಾನ ಕೊಡುತ್ತಾರೆ. ಈ ವ್ಯಾಖ್ಯಾನದಲ್ಲಿ ನಿರೂಪಣೆ, ಸಮರ್ಥನೆ, ದರ್ಶನವು ಆಗಿದೆ. ಮನುಷ್ಯನಲ್ಲಿರುವ ಮೌಢ್ಯಗಳನ್ನು ತೊಳೆದು. ಮಾನವೀಯ ಮೌಲ್ಯಗಳನ್ನು ಪ್ರತಿಪಾದಿಸುತ್ತಾರೆ. ಜಾತಿ, ವರ್ಗ, ಅನಾಚಾರ, ಭ್ರಷ್ಟಾಚಾರ, ಅಸಮಾನತೆ, ಶೋಷಣೆ ತಾರತಮ್ಯಗಳ ನಡುವೆ ಬೆಳೆದ ಸಂಗಣ್ಣನವರು ಕವಿತೆಗಳು ಆಶಾವಾದದ ಬೆಳಕನ್ನು ನೀಡಿದೆ.

### ೨.೨ ಪ್ರಶಸ್ತಿ ಮತ್ತು ಪುರಸ್ಕಾರಗಳು

ವಿವಿಧತೆಯಲ್ಲಿ ಏಕತೆ ಪಡೆದ ಸಂಗಣ್ಣನವರು ಜಾನಪದ ಸಾಹಿತ್ಯದಲ್ಲಿ ಪ್ರಖ್ಯಾತಿ ಪಡೆದರು. ಕ್ಷೇತ್ರ ಕಾರ್ಯದ ಮೂಲಕ ಕೃತಿಗಳನ್ನು, ನಾಟಕಗಳನ್ನು ರಚಿಸಿದರು. ನಡೆಯುತ್ತಿರುವ ವರ್ತಮಾನ ಕಾಲದ ಎಳೆಯನ್ನು ಪೌರಾಣಿಕ ಕಥಾವಸ್ತು ಆಧರಿಸಿ ಆಧುನಿಕ ಸ್ವರೂಪ ಕೊಟ್ಟರು. ಕೃಷಿಕನಾಗಿ, ವ್ಯಾಪಾರಸ್ಥನಾಗಿ, ಜಾನಪದ ಸಂಪಾದನಕಾರನಾಗಿ, ಭೌದ್ಧಿಕ ವಲಯದಲ್ಲಿ ಬೆಳೆದ ಮುದೇನೂರು ಸಂಗಣ್ಣನವರಿಗೆ ನಿಲುಕಲಾರದಷ್ಟು ಪ್ರಶಸ್ತಿ, ಪುರಸ್ಕಾರಗಳು ಸಂದಿವೆ. ಒಂದೊಂದು ಕೃತಿಗಳು ಒಂದೊಂದು ಪ್ರಶಸ್ತಿಗಳಿಗೆ ಭಾಜನವಾಗಿವೆ. ಸಂಗಣ್ಣನವರು ಹೈಸ್ಕೂಲು ಓದುತ್ತಿರುವಾಗಲೆ ಪ್ರಶಸ್ತಿಗಳಿಗೆ ಭಾಜನರಾಗಿದ್ದರು.

೧೯೪೫ರಲ್ಲಿ ಹೈಸ್ಕೂಲಿನಲ್ಲಿ ವಿದ್ಯಾಭ್ಯಾಸ ಮಾಡುತ್ತಿರುವಾಗ 'ಕರ್ನಾಟಕ ಏಕೀಕರಣ ಕುರಿತು ಭಾಷಣ ಸ್ಪರ್ಧೆಯಲ್ಲಿ ಮಾತನಾಡಿದರು. ಅದಕ್ಕೆ ಪ್ರಥಮ ಬಹುಮಾನವು ಬಂದಿತು.

ಮುದೇನೂರು ಸಂಗಣ್ಣನವರ ನಾಟಕ ರಂಗಭೂಮಿಯ ಕಾರ್ಯವನ್ನು ಕಂಡು ಪ್ರತಿಭೆಯನ್ನು ಗುರುತಿಸಿ, ೧೯೮೯ರಲ್ಲಿ ಮೊಟ್ಟ ಮೊದಲ ಬಾರಿಗೆ ಕರ್ನಾಟಕ ನಾಟಕ ಅಕಾಡೆಮಿಯ ಫೆಲೋಷಿಪನ್ನು ನೀಡಿ ಗೌರವಿಸಿದೆ. ಜಾನಪದ ಸಂಗ್ರಹ, ಸಂಪಾದನೆ ವಿದ್ವತ್ತನ್ನು ಕಂಡು ೧೯೯೨ರಲ್ಲಿ ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ "ಜಾನಪದ ತಜ್ಞ" ಪ್ರಶಸ್ತಿ ನೀಡಿ ಗೌರವಿಸಿದೆ.

೧೯೯೪ರಲ್ಲಿ ಧಾರವಾಡದಲ್ಲಿ ನಡೆದ ೨೧ನೇ ಅಖಿಲ ಕರ್ನಾಟಕ ಜಾನಪದ ಸಮ್ಮೇಳನದ ಅಧ್ಯಕ್ಷರಾಗಿದ್ದರು. ೧೯೯೪ರಲ್ಲಿ ನಡೆದ ಬಳ್ಳಾರಿ ಜಿಲ್ಲೆಯ ಹಡಗಲಿಯಲ್ಲಿ ನಡೆದ ೪ನೇ ಕನ್ನಡ ಸಾಹಿತ್ಯ ಸಮ್ಮೇಳನದ ಸರ್ವಾಧ್ಯಕ್ಷತೆ ವಹಿಸಿಕೊಂಡಿದ್ದರು. ೧೯೯೪ರಲ್ಲಿ ನಡೆದ ದಾವಣಗೆರೆ ಜಿಲ್ಲೆಯ ಮೊದಲ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷತೆಯ ಗೌರವ ಲಭಿಸಿತು. ಮೈಸೂರಿನಲ್ಲಿ ನಡೆದ

ಅಖಿಲಭಾರತ ಜಾನಪದ ಸಮಾವೇಶದಲ್ಲಿ ಗೌರವ. ಜಾನಪದ ಸಾಹಿತ್ಯ ಸೇವೆಯನ್ನು ಕಂಡು ೧೯೯೬ರಲ್ಲಿ ಕರ್ನಾಟಕ ಸರ್ಕಾರ 'ಕರ್ನಾಟಕದ ರಾಜ್ಯೋತ್ಸವ ಪ್ರಸಸ್ತಿಯನ್ನು ನೀಡಿದೆ. ೨೦೦೦ ವರ್ಷದಲ್ಲಿ ಕರ್ನಾಟಕ ಸಾಹಿತ್ಯ ಅಕಾಡೆಮಿ ಪ್ರಶಸ್ತಿ ದೊರಕಿತು. ೨೦೦೧ರಲ್ಲಿ ಕರ್ನಾಟಕ ಸಾಹಿತ್ಯ ಅಕಾಡೆಮಿಯು ಸೂಳೆ ಸಂಕವ್ವ ಎಂಬ ನಾಟಕಕ್ಕೆ ಕರ್ನಾಟಕ ಸಾಹಿತ್ಯ ಅಕಾಡೆಮಿ ಪ್ರಶಸ್ತಿ ಲಭಿಸಿತು.

೨೦೦೨ರಲ್ಲಿ ಸರ್ವಮಾನ್ಯ ಸೇವೆಯನ್ನು ಪರಿಗಣಿಸಿ ಕರ್ನಾಟಕ ಸಾಹಿತ್ಯ ಅಕಾಡೆಮಿಯ ಗೌರವ ಪ್ರಶಸ್ತಿಯನ್ನು ನೀಡಿ ಗೌರವಿಸಿದೆ. ಮೈಸೂರಿನ ಡಾ.ಎಲ್.ಬಸವರಾಜ ಪ್ರತಿಷ್ಠಾನ ಪ್ರಶಸ್ತಿಯನ್ನು ೨೦೦೨ರಲ್ಲಿ ಸರ್ವಮಾನ್ಯ ಸಾಹಿತ್ಯ ಸಾಧಕ 'ಗೌರವ ನೀಡಿ ಪುರಸ್ಕರಿಸಿದೆ. ೨೦೦೨ರಲ್ಲಿ ಸಮಗ್ರ ಸಾಹಿತ್ಯ ಪರಿಗಣಿಸಿ' "ಉಮಾಪತಿ ಚುಕ್ಕೆ ಪ್ರತಿಷ್ಠಾನ ಪ್ರಶಸ್ತಿ" ಲಭಿಸಿತು.

೨೦೦೨ರಲ್ಲಿ ಸಾಹಿತ್ಯ, ಜಾನಪದ, ರಂಗಭೂಮಿ, ಭಾಷಾವಿಜ್ಞಾನ ಕ್ಷೇತ್ರಗಳಿಗೆ ಕೊಟ್ಟಿರುವ ಕೊಡುಗೆಯನ್ನು ಕಂಡು ಶಿವಮೊಗ್ಗದ ಕರ್ನಾಟಕ ಸಂಘದ ಗೌರವ ಸದಸ್ಯತ್ವ ವಿಶೇಷಪುರಸ್ಕಾರ ಹಾಗೂ ಕನ್ನಡ ಸಿರಿ ಪ್ರಶಸ್ತಿ ನೀಡಿ ಗೌರವಿಸಿದೆ.

೨೦೦೧ರಲ್ಲಿ ಕನ್ನಡ ವಿಶ್ವವಿದ್ಯಾಲಯ ಹಂಪಿ ಘಟಿಕೋತ್ಸವ ಭಾಷಣ ಅದರಿಂದ ಸಿಕ್ಕ ಸನ್ಮಾನ ಗೌರವ. ೨೦೦೩ರಲ್ಲಿ ರಂಗಭೂಮಿಯ ಸಾಧನೆಗಾಗಿ ದಾವಣಗೆರೆಯಲ್ಲಿ ಮಹಾಲಿಂಗರಂಗ ಸಾಹಿತ್ಯ ಪ್ರಶಸ್ತಿ ಪುರಸ್ಕಾರ ದೊರೆತಿದೆ. ೨೦೦೬ರಲ್ಲಿ ನೆಲ, ಜಲ, ಸಂಸ್ಕೃತಿಗಾಗಿ ಕರ್ನಾಟಕ ಏಕೀಕರಣದಲ್ಲಿ ದುಡಿದ ಹಿರಿಯರನ್ನು ಕರ್ನಾಟಕ ಸರ್ಕಾರ ಆಚರಿಸಿದ ವಿಶ್ವ ಕನ್ನಡ ನೆನಪಿನಲ್ಲಿ ಗೌರವಿಸಲಾಯಿತು. ಆ ಗೌರವದಿಂದ ನಾಡು-ನುಡಿಯ ಸೇವೆಗಾಗಿ "ಏಕೀಕರಣ ಪ್ರಶಸ್ತಿ" ಲಭಿಸಿತು.

ಕರ್ನಾಟಕದ ಸಂಸ್ಕೃತಿ, ನೆಲ, ಭಾಷೆ, ಕನ್ನಡ ಸಾಹಿತ್ಯ, ಕಲೆ, ಜಾನಪದ ರಂಗಭೂಮಿ, ಸಾಮಾಜಿಕ ಸೇವೆಯಲ್ಲಿ, ಅನನ್ಯ ಸಾಧನೆ ಮಾಡಿರುವ ಹಿರಿಯರಿಗೆ, ಪ್ರತಿವರ್ಷವು ಕನ್ನಡ ವಿಶ್ವವಿದ್ಯಾಲಯ ಹಂಪಿ ಇವರಿಂದ ಗೌರವ ಲಭಿಸುತ್ತದೆ. ಅದರಲ್ಲಿ ಮುದೇನೂರು ಸಂಗಣ್ಣನವರನ್ನು ಆಯ್ಕೆ ಮಾಡಿ ೨೦೦೬ರಲ್ಲಿ 'ನಾಡೋಜ ಪದವಿ' ನೀಡಿ ಗೌರವಿಸಲಾಗುತ್ತದೆ. ಇದು ಪರಂಪರಾನುಗತವಾಗಿ ಹಿರಿಯ ಸಾಧಕರಿಗೆ ಕೊಡುವ ಪ್ರಶಸ್ತಿಯಾಗಿದೆ.

೨೦೦೭ರಲ್ಲಿ ಕು.ಶಿ. ಹರಿದಾಸಭಟ್ಟ ಪ್ರಶಸ್ತಿಯನ್ನು ವಾರ್ಷಿಕ ವಿದ್ವಾಂಸ ಕಲಾವಿದ ಪ್ರಶಸ್ತಿಯಾಗಿ, ಉಡುಪಿಯ ಪ್ರಾದೇಶಿಕ ಜಾನಪದ ರಂಗ ಕಲೆಗಳ ಅಧ್ಯಯನ ಕೇಂದ್ರ ನೀಡಿ ಗೌರವಿಸಿದೆ. ಬದುಕಿನ ಉದ್ದಕ್ಕೂ ಅವಿರತವಾಗಿ ದುಡಿದ ಪ್ರತಿಫಲವಾಗಿ ಹಾಗೂ, ಲಲಿತ ಕಲೆಗಳ ಪುನರುಜ್ಜೀವನ ಮಾಡಿದ್ದಕ್ಕಾಗಿ ಈ ಗೌರವ ಸ್ವೀಕರಿಸಿದರು.

ಮುದೇನೂರು ಸಂಗಣ್ಣನವರು ಭಾಷಾ ನಿಘಂಟು ಕ್ಷೇತ್ರದಲ್ಲಿ ವಿಶಿಷ್ಟ ಮತ್ತು ಅಪೂರ್ವ ಸಾಧನೆ ಮಾಡಿರುವ "ಚಿಗಟೇರಿ ಪದ ಕೋಶ ನಿಘಂಟುವಿಗೆ" ಭಾಷಾ ವಿಜ್ಞಾನಿಗಳು ಅಂತರಾಷ್ಟ್ರೀಯ ದ್ರಾವಿಡ ಭಾಷಾ ವಿಜ್ಞಾನ ಪ್ರಶಸ್ತಿ ನೀಡಿ ಗೌರವಿಸಿತು.

ಡಾ.ಬಸವರಾಜ ಮಲಶೆಟ್ಟರು ಅಭಿನಂದನ ಗ್ರಂಥ ಅರ್ಪಿಸಬೇಕೇಂದು ಪ್ರಸ್ತಾಪಿಸಿದಾಗ ಅದಕ್ಕೆ ಪ್ರತಿಫಲವಾಗಿ ಮುದೇನೂರು ಸಂಗಣ್ಣನವರು "ನೀವು ನನ್ನನ್ನು ಸನ್ಮಾನ ಅಭಿನಂದನೆಗಳ ನೇಣಿಗೇರಿಸಲು ಮತ್ತೆ ಮುಂದಾಗಿದ್ದೀರಲ್ಲ! ನನ್ನ ಪರಿಮಿತಿ ನನ್ನ ಅರಿವಿನಲ್ಲಿದೆ. ನನ್ನ ಯಾವ ಕೊಡುಗೆಯೂ ಸನ್ಮಾನ ಪ್ರಮಾಣದ್ದಲ್ಲ. ಮುಸ್ಸಂಜೆಯ ಅಂಗಳದಿಂದ ಆಚೆ ಜಾರುತ್ತಿರುವ ನನಗೆ ಇನ್ನಾವ ಮುನ್ನಣೆಯ ಮಣೆಯ ಆಸೆ, ಜರೂರು ಇಲ್ಲ."[೯] ಎನ್ನುವ ನಿರ್ಮೋಹಿ ಅವರಾಗಿದ್ದರು.

**ಕೊನೆ ಟಿಪ್ಪಣಿಗಳು**

೧. ಚಿಕ್ಕಣ್ಣ ಯಣ್ಣೆಕಟ್ಟೆ (ಡಾ),(ಲೇ), ನಾರಾಯಣ ಪಿ.ವಿ., (ಡಾ), (ಸಂ), 'ಚಿಗಟೇರಿಯ ಚೇತನ ಮುದೇನೂರು ಸಂಗಣ್ಣ', ಪು.ಸಂ.೫

೨. ಅದೇ ಪುಸ್ತಕ, ಪು.ಸಂ.೫

೩. ಅದೇ ಪುಸ್ತಕ, ಪು.ಸಂ.೬

೪. ಅದೇ ಪುಸ್ತಕ, ಪು.ಸಂ.೬

೫. ಅದೇ ಪುಸ್ತಕ, ಪು.ಸಂ.೯

೬. ಅದೇ ಪುಸ್ತಕ, ಪು.ಸಂ.೧೦

೭. ಅದೇ ಪುಸ್ತಕ, ಪು.ಸಂ.೪೭

೮. ಚಿಕ್ಕಣ್ಣ ಯಣ್ಣೆಕಟ್ಟೆ (ಡಾ),(ಲೇ), ನಾರಾಯಣ ಪಿ.ವಿ., (ಡಾ), (ಸಂ), 'ಚಿಗಟೇರಿಯ ಚೇತನ ಮುದೇನೂರು ಸಂಗಣ್ಣ', ಪು.ಸಂ.೩೧

೯. ಶಿವ ಪ್ರಕಾಶ. ಎಂ.ಎಂ. (ಸಂ) 'ಜಾನಪದ ತಜ್ಞ ಮುದೇನೂರು ಸಂಗಣ್ಣ' ಪು.ಸಂ. ೧೨೪

## ಅಧ್ಯಾಯ : ಮೂರು

# ಮುದೇನೂರು ಸಂಗಣ್ಣನವರ ಸಂಪಾದಿತ ಕೃತಿಗಳು

೩.೧. ಹಳ್ಳಿಯ ಪದಗಳು

೩.೨. ನವಿಲು ಕುಣಿದಾವ

೩.೩. ಗೊಂದಲಿಗರ ದೇವೇಂದ್ರಪ್ಪನ ಆಟಗಳು

೩.೪. ಗೊಂಬೀಗೌಡರ ಸೂತ್ರದ ಗೊಂಬೆ ಆಟಗಳು

೩.೫. ಕೊಂಡಜ್ಜಿ ಬಸಪ್ಪನ ಜೀವನ ಚರಿತ್ರೆ

## ಅಧ್ಯಾಯ-೩

# ಮುದೇನೂರು ಸಂಗಣ್ಣನವರ ಸಂಪಾದಿತ ಕೃತಿಗಳು

ಸಂಗಣ್ಣನವರ ಸಂಪಾದಿತ ಕೃತಿಗಳಲ್ಲಿ ಹೆಚ್ಚಿನವು ಗ್ರಾಮೀಣ ಕ್ಷೇತ್ರದ ಪ್ರತಿಭಾವಂತ ಕಲಾವಿದರನ್ನು ಗುರುತಿಸುತ್ತವೆ. ದಮನಿತ ವರ್ಗದ, ವೃತ್ತಿ ನಿರತ ಅಲೆಮಾರಿ ಜೋಗಿಗಳ ಹಿಂದೆ ಅಲೆದಾಡಿ, ಕ್ಷೇತ್ರ ಕಾರ್ಯದ ಮೂಲಕ ಮಾಹಿತಿ ಸಂಗ್ರಹಿಸಿ ಸಂಪಾದಿಸಿದ ಕೃತಿಗಳೇ ಹೆಚ್ಚುಕಂಡು ಬರುತ್ತವೆ. ಅವುಗಳು ಪ್ರಕೃತಿಯ ವರ್ಣನೆ, ಸ್ತ್ರೀ ಸಂವೇದನೆ, ಶೋಷಣೆ, ಪುರುಷ ಪ್ರದಾನ ವ್ಯವಸ್ಥೆ, ಸಾಮಾಜಿಕ ಗತಿ ಶೀಲತೆ, ಭೌದ್ಧಿಕ ವರ್ಗದವರು ಕೊಡುವ ಮಾನಸಿಕ ಯಾತನೆ ಇಂಥ ಹಲವು ಸಂಗತಿಗಳನ್ನು ವೈಚಾರಿಕ ವಿಮರ್ಶೆಗೆ ಒಳಪಡಿಸುತ್ತಾರೆ. ತೀರಾ ಭಾವನಾತ್ಮಕವೂ ಆಗದ ಅತಿ ವೈಚಾರಿಕವೂ ಆಗದ ಅರ್ಥಪೂರ್ಣ ಸಂಪಾದನೆ ಅವರ ವೈಶಿಷ್ಟವಾಗಿದೆ. ಒಟ್ಟು ಆರು ಕೃತಿಗಳನ್ನು ಸಂಪಾದಿಸಿದ್ದಾರೆ.

### ೩.೧. ಹಳ್ಳಿಯ ಪದಗಳು

೧೯೬೮ರಲ್ಲಿ ಕೆ.ವಿರೂಪಾಕ್ಷಗೌಡ ಮತ್ತು ಮುದೇನೂರು ಸಂಗಣ್ಣನವರು ಸಂಪಾದನೆಯ ಮೊದಲ ಜನಪದ ಸಂಗ್ರಹ ಇದಾಗಿದೆ. ಬಳ್ಳಾರಿ ಜಿಲ್ಲೆಯ ಹೊಸಪೇಟೆ, ಕೊಟ್ಟೂರು, ಕೂಡ್ಲಿಗಿ, ಹರಪನಹಳ್ಳಿ ಚಿಗಟೇರಿ ಸುತ್ತಮುಲಿನ ಗ್ರಾಮೀಣ ಕಲಾವಿದರ ಬಾಯಲ್ಲಿದ್ದ ಜಾನಪದ ಪದಗಳ ಹೊತ್ತಿಗೆ ಇದಾಗಿದೆ.

ಹಳ್ಳಿಯಲ್ಲಿ ಬದುಕುವ ಅನಕ್ಷರಸ್ಥ ಮುದುಕ ಮುದುಕಿಯರ, ವಯಸ್ಸಾದ ವೃದ್ಧರ ಜ್ಞಾನದ ಬುತ್ತಿಯಲ್ಲಿ ಇಂಥ ಹಲವು ಹಾಡು ಕತೆಗಳು ಅವಿತು ಕೂತಿವೆ. ಅವರು ಸಾವನ್ನಪ್ಪಿದರೆ ಅವರೊಂದಿಗೆ ಇಂಥ ಜ್ಞಾನ ಸಂಪತ್ತು ನಾಶವಾಗುತ್ತದೆ. ಜನಪದರ ಬದುಕಿನ ವಿವಿಧ ಮಗ್ಗುಲಗಳನ್ನು ಈ ಕೃತಿ ಹೇಳುತ್ತದೆ.

ಕನ್ನಡ ಜಾನಪದ ವಿದ್ವಾಂಸರಲ್ಲಿಯೇ ಅಗ್ರಮಾನ್ಯರಾದ ಮುದೇನೂರು ಸಂಗಣ್ಣನವರು ಹಳ್ಳಿಯ ಪದಗಳು ಸಂಪಾದನ ಈ ಕೃತಿ ಅಪರೂಪವಾದದ್ದು. ಸಮಾಜದಲ್ಲಿ ಬದುಕುವ ಜನರ ಜೀವನ, ಸಮಸ್ಯೆ, ಪರಿಹಾರ, ಬೇಸರ, ಮನೋರಂಜನೆಗಳ, ರಸ ಭರಿತವಾದ, ಹಳ್ಳಿಯ ಬದುಕಿನ ಚಿತ್ರಣದ, ದೇವರುಗಳ ಪ್ರಾರ್ಥನೆಯೋಪಾದಿಯಲ್ಲಿ ಇಲ್ಲಿನ ಪದಗಳ ರಚನೆಯಿದೆ.

ಯಾವುದಾದರೂ ಕೆಲಸಕ್ಕೆ ಹೋಗಬೇಕಾದರೆ ಮೊದಲು ದೇವರಿಗೆ ಕೈ ಮುಗಿದು ಬೇಡಿಕೊಳ್ಳುವ ಒಂದು ಪದ್ಧತಿಯನ್ನು ಇವು ಕಟ್ಟಿ ಕೊಡುತ್ತವೆ. ತಮ್ಮ ಹಾಡಿನ ಆರಂಭದಲ್ಲಿ ತಮ್ಮ ಆರಾಧ್ಯ ದೇವರುಗಳಾದ

ಶಿವ, ಗಿರಿಜೆ, ಕಾಳಿಂಗ, ಉಚ್ಚಂಗಿ ಕೆಂಚಪ್ಪ, ಮೈಲಾರ ಲಿಂಗ, ಕೊಟ್ಟೂರ ಬಸವಣ್ಣ, ಕೂಲಳ್ಳಿ ಚೆನ್ನಿಗ, ವೀರಭದ್ರ ದೇವರುಗಳ ವೈಭವ ಪ್ರಭಾವ, ಅಲಂಕಾರ, ಸೌಂದರ್ಯವನ್ನು ವರ್ಣಿಸುತ್ತಾರೆ.

ಲೌಕಿಕ ಮತ್ತು ಅಲೌಕಿಕದ ಜ್ಞಾನ ತಿಳಿದ ಜನಪದರು ಕೈಲಾಸವೇ ತವರು, ಶಿವ ಮತ್ತು ಗಿರಿಜೆ ತಂದೆ ತಾಯಿ, ಶರಣರೆ ಬಂಧು ಬಳಗ ಎನ್ನುವ ಅನಿಕೇತನ ಪ್ರಜ್ಞೆಯನ್ನು ಕಾಣುತ್ತೇವೆ. ಉಟ್ಟ ಉಡುಗೆ, ನಾಗಾಭರಣ ತೊಟ್ಟ ಉಚ್ಚಂಗಿ ಕೆಂಚಪ್ಪನ ಕೋಪ, ಉರಿಗಣ್ಣಿನಲ್ಲಿಯೇ ಭಕ್ತರನ್ನು ಸುಡುವ ಕರ್ಪೂರದಲ್ಲಿ ಕರಗಿ ಧೂಪದ್ಹೊಗೆಯಲ್ಲಿ ಮುಳುಗಿ ಹೋಗುವ ಅತಿಮಾನುಷ ಶಕ್ತಿಯನ್ನು ವರ್ಣಿಸುತ್ತಾ, ತಗ್ಗಿನಾಗಿರುವ ಚಿಗಟೇರಿಯ ನಾರಪ್ಪನ ಹುಬ್ಬಿನಲ್ಲಿ ಸಿರಿಗಂಧ ಕಾಣುವ ಬದುಕು ನಮ್ಮದಾಗಬೇಕು ಎನ್ನುವ ತಾತ್ವಿಕತೆ ಇದೆ.

ಸುಸಂಸ್ಕೃತ ವ್ಯಕ್ತಿಗಳಾಗಿ ಬದುಕು ನಡೆಸಬೇಕಾದರೆ ಜನಪದರು ಕಂಡ ಆದರ್ಶ ವ್ಯಕ್ತಿಗಳೆನಿಸಿದ ಹರಿಶ್ಚಂದ್ರನ ಮತ್ತು ಆತನ ಮಗ ಲೋಹಿತಾಶ್ವ, ಶೌರ್ಯದಿಂದ ಯುದ್ಧೋತ್ಸಾಹದಲ್ಲಿ ಸತ್ತ ಅಭಿಮನ್ಯು ಸಾಹಸ ಕಥೆಗಳು ಬಸವಣ್ಣನ ಭಕ್ತಿಯ ತತ್ವಗಳ ಪರಿಪಾಲನೆ ಅತೀಮುಖ್ಯ. ರಕ್ತ ಪೀಠಕ್ಕೆ ಅಭಿಷೇಕ ಮಾಡುವುದಕ್ಕಿಂತ, ಮಲ್ಲಿಗೆ ದಂಡೆಯ ಪರಿಮಳದ ಸುವಾಸನೆಯಲ್ಲಿ ಭಕ್ತಿಯನ್ನು ಕಾಣುವುದು ಶ್ರೇಷ್ಠ, ಭಕ್ತಿಯಲ್ಲಿ ಶ್ರೇಷ್ಠ, ಉತ್ತಮ ಕನಿಷ್ಠ ಎಂಬುದು ಇಲ್ಲ.

ನಿಜವಾದ ಭಕ್ತನಾದವನು ಸಿರಿ ಸಂಪತ್ತು ಬೇಡುವುದಿಲ್ಲ. ಯಾವುದೇ ದೌಲತ್ತು ನನಗೆ ಬೇಡ. ನನ್ನ ಮಗನಿಗೆ "ಭೂಮಿಯ ಉಳುವುದಕ್ಕೆ ಎರಡು ಎತ್ತು, ಅಳಿ, ಬಂಡಿ, ಕಾಲ್ಗಂಚದ ಜೋಡು ಕೊಡು" ಎಂಬ ವಾಸ್ತವ ಹಾಗೂ ವಾತ್ಸಲ್ಯ ಭಾವವನ್ನು ಕಾಣುತ್ತೇವೆ. ವ್ಯಕ್ತಿಗತ ಬೇಡಿಕೆಗಿಂತ ಸಮುದಾಯ ನಿಷ್ಠ ಬೇಡಿಕೆ ಕಾಣುತ್ತದೆ. ಒಂದು ಕೃಷಿ ಸಂಸ್ಕೃತಿಯನ್ನೇ ಜೀವಂತ ಉಳಿಸಬೇಕೆನ್ನುವ ಅಗಾಧತೆ ಇಲ್ಲಿನ ಹಾಡುಗಳಲ್ಲಿದೆ.

ಸ್ವಾರ್ಥದಿಂದ ಕೂಡಿರುವ ಮನುಷ್ಯ ಸಮಾಜದಲ್ಲಿ ಟೊಳ್ಳು, ಮೋಸ, ವಂಚನೆ ಆಳವಾಗಿ ಬೇರು ಬಿಟ್ಟಿದೆ. ಅದರ ಬಗ್ಗೆ ಚಿಂತೆ ಮಾಡದೆ ಬದುಕ ಬೇಕು. ಆಪತ್ತು ಒದಗಿದಾಗ ಯಾರು ನಮ್ಮನ್ನು ರಕ್ಷಿಸುವುದಿಲ್ಲ. ನಮ್ಮ ರಕ್ಷಣೆ ನಮ್ಮ ಹೊಣೆ ಬಂಧು ಬಳಗದ ಹುಸಿ ಪ್ರೀತಿಯನ್ನು ವಾಸ್ತವದ ನೆಲೆಯಲ್ಲಿ ಈ ಹಾಡುಗಳು ಮನಕ್ಕೆ ಮುಟ್ಟಿಸುತ್ತವೆ.

"ಜೀವಕ್ಕೆ ಬಂದರೆ ತಾಯಾರ ತಂದೆ ಯಾರ
ಮೈದುನನ್ಯಾರ ಮಗನ್ಯಾರ ಸಾಯಲ್ಹಾಗ
ಕೈ ಹಿಡಿದ ರಾಯ ಕಡೆಗಾದ"

ಈ ಜಗತ್ತಿನ ಮರ್ಮವನ್ನು ಅರ್ಥಮಾಡಿಕೊಳ್ಳಬೇಕಾದರೆ ಮನುಷ್ಯ ವಿವೇಕವಂತನಾಗಬೇಕು. ಅತಿ ಆಸೆ ಆಳಿಯ ಬೇಕು ಸಂಯಮದಿಂದ ಮರ್ತ್ಯವನ್ನು ಗೆದ್ದು ಅನುಭಾವಿಗಳಾಗಿ ಬದುಕು ನಡೆಸಬೇಕು. ಅದಕ್ಕೆ ಆಧ್ಯಾತ್ಮಿಕಗಳಾಗಿ ಉರಿಯುವ ಬೆಂಕಿಯಲ್ಲಿ ಬೆಂದು, ಗರಗಸದ ಗಾಣಕ್ಕೆ ಶಿರವನ್ನು

ಕೊಡಬೇಕು. ಕಷ್ಟ ಬಂದಾಗ ಶಿವನನ್ನು ನೆನೆಯುವುದು, ಸುಖ ಬಂದಾಗ ಮರೆತು ಹೋಗುವುದು ಸಹಜ. ಇಂತವರು ನಿತ್ಯ ಪೂಜೆಗೆ ಅನರ್ಹರು.

ಸಚ್ಚಾರಿತ್ರ್ಯವುಳ್ಳ ತಾಯಿಯೊಬ್ಬಳು ಮಗನ ಮೇಲಿರುವ ವಾತ್ಸಲ್ಯದಿಂದ ಮಜ್ಜಿಗೆ ಕಡೆಯುತ್ತಾ, ವಜ್ರದ ನೀರ್‍ಗಿ ಒಗೆಯುತಾ, ಮಗನನ್ನು ಪ್ರೀತಿಯ ಸೆರಗಿನಲ್ಲಿ ಮುದ್ದಾಡುವ ದೃಶ್ಯವು ಹಳ್ಳಿಯ ಸಂಸ್ಕೃತಿಯನ್ನು ಕಟ್ಟಿ ಕೊಡುತ್ತದೆ. ಮಹಾಶಿವಶರಣರಿಗೆ ಜನ್ಮ ಕೊಟ್ಟ ತಾಯಿಯ ಸಾತ್ವಿಕ ಗುಣಕ್ಕೆ ಬೆಲೆ ಕಟ್ಟಲಾಗದು. ಈ ಶರಣರು ಜಂಗಮರಂತೆ ದಟ್ಟ ಅರಣ್ಯದಲ್ಲಿ ಅಲೆದಾಡುತ್ತಿದ್ದರು. ಆ ಶರಣರನ್ನು ಬುದ್ಧಿವಂತರು ಹಿಡಿದು ತಂದು, ನೂರೊಂದು ಹೂವನ್ನು ಮುಡಿಸಿ ಮದುವೆ ಮಾಡಿದರು. ಹೆಂಡತಿ ಬಂಜೆಯಾಗಿ ಕೊಟ್ಟೂರ ಬಸವಣ್ಣನನ್ನು ಬೇಡಿದಾಗ, ತೊಟ್ಟಿಲ ಸಮೇತ ಹೊರಿಸಿ ಕಳುಯಿಸುವ ಮಾನ್ಯ ಶರಣರ ನೆಲೆ ಮಾನವರಿಗೆ ತಿಳಿಯದು.

ಮೋಸ, ವಂಚನೆ, ಕಪಟವಿಲ್ಲದ ಮುಗ್ಧ ಸ್ವಭಾವದವರು, ಕಾವಿ ಧರಿಸಿದ, ಶರಣರು "ಆನಿ" ನಡೆದದ್ದೆ ದಾರಿಯಾಗಿದೆ. ಆ ಶರಣರ ಭಕ್ತಿಯ ಸಾಹಸವನ್ನು, ಜನಪದರು ವರ್ಣಿಸುವಾಗ ಭೂ ಮಂಡಲವೇ ಬಿರುಕು ಬಿಟ್ಟಾಂಗಾತು.

"ಹಾವು ಹಗ್ಗವ ಮಾಡಿ ಚೇಳು ಚಿಕ್ಕವ ಮಾಡಿ

ಊದಿನ ಕಡ್ಡಿ ನೊಗ ಮಾಡಿ। ಹೂಡ್ಯಾರ

ಇವರೆಂಥವರಣ್ಣ ಶಿವಶರಣರು"[೨]

ಜನಪದರು ಶಿವಶರಣರ ಅಲೌಖಿಕದ ಕನಸಿನ ಭಾವನೆಗಳನ್ನು ಅಭಿವ್ಯಕ್ತಪಡಿಸಿದ್ದಾರೆ.

ಮುಕುಟದಾರಿಗಳ, ನಯವಂಚಕರ ಟೊಳ್ಳು ಮಾತುಗಳಿಗೆ ಪಶುಗಳಂತೆ ಬಲಿಯಾಗುತ್ತಿದ್ದೇವೆ. ಅದನ್ನು ಕಂಡ ಪ್ರಕೃತಿ ಧ್ಯಾನಮಗ್ನಳಾಗಿದ್ದಾಳೆ. ಅದನ್ನು ಎದುರಿಸುವ ಶಕ್ತಿ ಕಾಯುವ ಧೈರ್ಯ ಹುಟ್ಟಿನಿಂದಲೇ, ರಕ್ತದ ಕಣದಲ್ಲಿ ಹರಿದಾಡುವ ಗುಣ ಮಾಯದ ಮಿಂಚಿನಂತೆ ಹೊಳೆಯುತ್ತಿದೆ. ಮೊನ್ನೆ ಇದ್ದ ಗುಡ್ಡ ಇಂದು ಕಾಣಿಸದೆ ಹೋಗಿದೆ. ಜವರಾಯ ಆಡಿಸಿದ ನಾಟಕೀಯ ಬದುಕಿಗಿಂತ, ಶರಣರ ನೇರ ನಡೆ ಉತ್ತಮದಿಂದ ಕೂಡಿದೆ. ಒಳ್ಳೆಯದನ್ನು ಯೋಚಿಸುವ ಚಾಣಾಕ್ಷತನದ ಗಂಧವನ್ನು ಕೊಟ್ಟೂರ ಶರಣನ ನೊಸಲಿಗೆ ಅಚ್ಚಬೇಕು. ಅದರಿಂದ ಎಚ್ಚರಗೊಂಡ ಶರಣನು ದುರ್ವ್ಯಸನಿಗಳ ಅಟ್ಟಹಾಸವನ್ನು ಮೆಟ್ಟಿ ನಿಲ್ಲುತ್ತಾನೆ.

ತಂದೆ-ತಾಯಿ ಇರುವ ತವರಿನ ಗಾಂಭೀರ್ಯವನ್ನು ಮಗಳು ವರ್ಣಿಸುತ್ತಾಳೆ. ಅವರು ಏಳು ಸುತ್ತಿನ ಕೋಟೆಯ ಒಳಗೆ ಸುರಕ್ಷಿತವಾಗಿದ್ದಾರೆ. ಮಗಳ ನೆನಪು ಅವರಿಗೆ ಇಲ್ಲ. ಊರಿನ ತಳವಾರನೆ ಹೋಗಿ ಎಚ್ಚರಿಸಬೇಕಾಗಿದೆ. ತಾನಿದ್ದಲ್ಲಿಯೇ ಅಪ್ಪನ ಧರ್ಮದ ದೀಪ ಬೆಳಗಲೆಂದು ಹಾರೈಸುತ್ತಿದ್ದಾಳೆ. ಆ ದೀಪ ತೇರಿನ ಮೇಲೆ ಕಾಣುತ್ತದೆ. ತಾಯಿಯ ಸ್ವರೂಪವನ್ನು ಕುರಿತು ಹೇಳುತ್ತಾ, ತನ್ನ ನೋವನ್ನು ಹಂಚಿಕೊಳ್ಳುತ್ತಾಳೆ.

"ಬೆಳ್ಳುಳ್ಳಿ ಬೆಳ್ಳಗೆ ನಮ್ಮವ್ವ ತೆಳ್ಳಗೆ

ನಾ ಬೆಳೆದ ಬಾಳಿಯ ಸುಳಿಯಾಗ। ಹಡೆದವ್ವ

ನನ್ಯಾಕ ಹಡೆದೆ ನೆರೆಮನೆಗೆ"

ಹಡೆದವ್ವ ಇರುವ ತನಕ ತಾಯಿಯ ಸಿರಿಯನ್ನು, ಹಂಪೆಯ ದವನವನ್ನು ಕಣ್ತುಂಬ ನೋಡಬೇಕು. ತಾಯಿಯ ತವರು ಸ್ಥಿರವಲ್ಲ ಎಂಬುದನ್ನು ಅರಿತು ಬದುಕಬೇಕು. ಸಿರಿತನದಿಂದ ಕೂಡಿದ ತವರಿನಿಂದ ಧನ ಧಾನ್ಯ ತರುವ ಶಕ್ತಿ ಇದೆ. ಆದರೆ ನನ್ನ ಅತ್ತಿಗೆ ತವರು ಮನೆಯನ್ನು ಅಲಂಕರಿಸಿದ್ದಾಳೆ. "ಅತ್ತಿಗೆಯು ತೌರಲ್ಲ ಹಿತ್ತಾಳಿ ವಡವ್ಯಲ್ಲ" ಎಂಬ ಬದುಕಿನ ವಿಪರ್ಯಾಸವನ್ನು ಗರತಿಯ ಹಾಡುಗಳು ಹೇಳುತ್ತವೆ.

ಸಂಬಂಧಗಳ ನಡುವೆ ದುಃಖ, ವಿರಸ, ವ್ಯಥೆ ಹುಟ್ಟಿಕೊಳ್ಳುವುದು ಸಹಜ ಕಲ್ಲು ಮುಳ್ಳಿನ ಹಾದಿಯನ್ನು ಎಚ್ಚರಿತು ಜೀವನದ ಬಂಡಿಯನ್ನು ಸಾಗಿಸಬೇಕು. ಮಾನವೀಯ ಬದುಕಿನಲ್ಲಿ ಹಲವು ಅಡೆ-ತಡೆ, ತೊಂದರೆ ಇದ್ದೆ ಇರುತ್ತದೆ. ಅದನ್ನು ಮೆಟ್ಟಿ ನಿಂತು ಕೃತಕ ಸರಪಳಿಯನ್ನು ಭೇದಿಸಿ, ಶೋಷಿನೋಡಬೇಕು. ಅದನ್ನು ತಿಳಿಯಲು, ಎಲ್ಲರೂ ಒಂದು ಗೂಡಿ, ಮಕ್ಕಳಿಗೆ ಶಿಕ್ಷಣ ಓದು, ಬರಹವನ್ನು ಕಲಿಸಬೇಕು. ಯಾರಿಗೂ ಎರಡು ಬಗೆಯ ಬಾರದು.

ಬದುಕಿನಲ್ಲಿ ಒಮ್ಮೆ ಬಿರುಕು ಬಿಟ್ಟರೆ ಒಡೆದ ಕನ್ನಡಿಯಂತೆ ಹನ್ನೆರಡು ಚೂರಾಗಿ ಮನಸ್ಸು ಕಳವಳಕ್ಕೆ ಸಿಲುಕಿಕೊಳ್ಳುತ್ತದೆ. ಈ ಗೊಂದಲಕ್ಕೆ ಒಳಗಾದ ಹೆಣ್ಣಿಗೆ ಯಾವುದೇ ಸಮಾಧಾನ ದೊರಕುವುದಿಲ್ಲ. ಗಂಡ ಸತ್ತ ಹೆಣ್ಣು ಸಂಸಾರ ಮಾಡುವುದು ಕಷ್ಟ. ಅದನ್ನು ಕಂಡ ಜನರು ಸಹಿಸುವುದಿಲ್ಲ. ವಿಧವೆಗೆ ಬಂಗಾರವಿದ್ದರೂ ಶೃಂಗಾರವಿಲ್ಲದ ಬಾಳು ಬೆಂಗಾಡಾಗಿದೆ. ಬಿರುಗಾಳಿಯ ಸುಳಿಯಲ್ಲಿ ಸಿಕ್ಕು ಹೊರ ಬರದಂತಾಗಿದೆ ಎಂದು ತಿವಿಯುತ್ತಾರೆ.

ಹಿಂದಿನ ಕಾಲದ ಅಣ್ಣತಂಗಿಯರ ಸಂಸ್ಕೃತಿ, ಸಾಹಿತ್ಯ ಜೀವನ, ಅವರ ಶಕ್ತಿಯನ್ನು ಈಗಿನ ಯುವ ಪೀಳಿಗೆಗೆ ತಿಳಿಸುವುದು ಅರ್ಥಪೂರ್ಣವಾದುದು. ಒಂದೇ ಕುಟುಂಬದಲ್ಲಿ ಪ್ರೀತಿ, ವಿಶ್ವಾಸ, ಸಿರಿತನದಲ್ಲಿ ಬೆಳೆದ ಅಣ್ಣ ತಂಗಿಯರು ಅಗಲುವುದು ವಿಧಿ ಲಿಖಿತ, ಇವರಿಬ್ಬರ ನಡುವೆ ಮೂಗು ಮುರಿಯುವ ಅತ್ತಿಗೆ, ಬೇವು-ಬೆಲ್ಲಗಳ ನಡುವಿನ ಸ್ವಾರಸ್ಯ ರಹಿತವಾದದ್ದು. ಅಣ್ಣನು ತಂಗಿಯನ್ನು ಧಾರೆಯೆರೆದು, ಕಾಲುತೊಳೆದು, ಜಾತಿ ನೀಲದ ಬಳಿ ಹಾಕಿಸಿ, ಶಾಸ್ತ್ರಗಳನ್ನು ಮಾಡಿಸಿ, ಉಡಿಯಕ್ಕಿ ಹಾಕಿ, ಮುತ್ತೈದೆಯರಿಂದ ಅರಿಸಿನ ಕುಂಕುಮ ಕೊಟ್ಟು ಗಂಡನ ಮನೆ ಬೆಳಗಲೆಂದು ಕಳುಯಿಸುವ ಆಚರಣೆ ಜನಪದರ ಸಂಸ್ಕೃತಿಯ ವೈಶಿಷ್ಟಗಳಾಗಿವೆ.

ಈ ಸಂಬಂಧಕ್ಕೆ ಕೊನೆಯಾಗಬಾರದೆಂದು ತಂಗಿಯು ಕಳ್ಳು-ಬಳ್ಳಿ ಹಬ್ಬಿಸಲು, ಅಣ್ಣನ ಮಗಳನ್ನು ಕೇಳುವ, ವಾಗ್ವಾದ ಮಾಡುವ, ತೆರವನ್ನು ಕೊಟ್ಟಾದರು ಪಡೆಯುವ ಛಲ ಗಮನಿಸುವಂಥದ್ದು.

"ಅಣ್ಣನ ಮಗಳಿಗೆ ತೆರವಿಲ್ಲ ತ್ಯಾಟಲ್ಲ

ಹನ್ನೆರಡು ವರಗಳ ಕರಿಯೆಮ್ಮೆ ಹಿರಿಮಂಚ

ನಿನ್ನ ಸೊಸೆ ಕರಕೊಂಡು ಹೋಗ"೪

ಅಣ್ಣನ ಕಾಲಿಡಿದು, ಬೇಡಿ, ದೈವದ ಪ್ರೀತಿಗೆ ಪಾತ್ರಳಾಗಿ, ಹನ್ನೆರಡು ಅಂಕಣದ ಅರಮನೆಗೆ ಹೊನ್ನಿಗೆ ಬಂದ ನಾರಿಯ ಕಾಲು ತೊಳೆದು, ಸೊಸೆಯನ್ನು ಮನೆ ತುಂಬಿಸಿಕೊಳ್ಳುವ, ಧೀರತನದ ಹೆಣ್ಣಿನ ವಾಸ್ತವ ಸ್ಥಿತಿಯನ್ನು ಚಿತ್ರಿಸಲಾಗಿದೆ.

ಮನುಷ್ಯ-ಮನುಷ್ಯರ ನಡುವೆ ಜಗಳ ಹಾಸ್ಯ ವಿಡಂಬನೆ, ಟೀಕಿಸುವ ಸಂಸ್ಕೃತಿ ಸಮಾಜದಲ್ಲಿ ತುಂಬಿ ತುಳುಕುತ್ತಿದೆ. ಒಳಿತು ಕೆಡಕುಗಳನ್ನು ಯೋಚಿಸುವ ತಾಳ್ಮೆ ಇಲ್ಲ. ದುಡಿಯುವ ವರ್ಗದ ಜನರು ಬೇಸರವಾದಾಗ, ಸಂದರ್ಭಕ್ಕೆ ತಕ್ಕಂತೆ ಹಾಸ್ಯ ಮಾಡುವ, ಪದಗಳನ್ನು ಕಟ್ಟಿ, ರಚಿಸಿ, ಹಾಡುವ ಕಲೆ, ಜನರನ್ನು ನಗಿಸುವ, ತಾನು ಖುಷಿ ಪಡುವ ವೈಸಿಷ್ಠತೆ ಜನಪದರಲ್ಲಿ ಕಾಣುತ್ತದೆ.

ಬದುಕಿನ ಜಂಜಾಟಗಳಿಂದ ಹೊರಬರಲು ಹಾಸ್ಯವು ಕಾರಣವಾಗುತ್ತದೆ. ನೀತಿ ನಿಯಮ ತತ್ವಬದ್ಧತೆಗಳಿಗೆ ಸಿಲುಕಿದಾಗ ಅದರಿಂದ ಹೊರ ಬರಲು ಬಣ್ಣದ ಮಾತುಗಳನ್ನು ಆಡಬೇಕಾಗುತ್ತದೆ. ಮೈ ಮಾಟದ ಕೈಚಳಕ ತೋರಿಸಬೇಕಾಗುತ್ತದೆ. ಮಾನವನಿಂದ ತಪ್ಪಿಸಿ ಕೊಳ್ಳಬಹುದು. ಪ್ರಕೃತಿಯ ಕೋಪಕ್ಕೆ ಯಾರು ಹೊರತಲ್ಲ. ವೈಶಾಖದ ಮಳೆಯ ರಭಸಕ್ಕೆ ಓಣಿ ಕೆಸರಾಗಿದೆ ಅದರಲ್ಲಿ ಹುಲಿಗೆವ್ವ ಜಾರಿ ಬಿದ್ದು, ಮುಡಿದ ಕ್ಯಾದಿಗಿ ತುರುಬು ಕೆಸರಾಗಿ ಬಿಟ್ಟಿದೆ. ಅವಳಿಗೆ ಸಹಾಯ ಮಾಡದೆ, ಗೆಳತಿ ಜಾರಿ ಬಿದ್ಯೆಲ್ಲೆ ಎಂದು ಹಾಸ್ಯಗೈಯುವವರೆ ಸಮಾಜದಲ್ಲಿ ಕಂಡುಬರುತ್ತಾರೆ.

"ಹಾವು, ಚೋಳು, ಕಬ್ಬಕ್ಕಿ, ಬಾಳಿ, ಯಾಲಕ್ಕಿ, ಬೊಳ್ಳೊಳ್ಳಿ, ಕುರುಬ,, ಕುಂಬಾರ, ಕುಂಟ, ಕುರುಡ, ಕುಣಕಲಿ ಗಿತ್ತಿ, ದ್ವಾಮಾರಿ, ತಗಣಿ" ಮುಂತಾದ ಜೀವಿಗಳ ಬದುಕಿನ ವಾಸ್ತವತೆಯನ್ನು ವಿಡಂಬಿಸಲಾಗಿದೆ.

ಸಮಾಜದಲ್ಲಿ ಸತ್ಯ, ನ್ಯಾಯ, ನಿಷ್ಠೆಯಿಂದ ಬದುಕಿದರು ಸಹ ಸಹಿಸದ ವ್ಯಕ್ತಿಗಳು, ಅಪಾರ್ಥ ಕಲ್ಪಿಸಿಕೊಂಡು, ಹೀನಾಯ ಸ್ಥಿತಿಗೆ ಎಳೆದೊಯ್ಯುತ್ತಾರೆ. ಗಂಭೀರ ನಡೆ ನುಡಿ ಇದ್ದರು ಹಲವು ಗುಣ ದೋಷಗಳನ್ನು ಕ್ಷಣದಲ್ಲಿ ಸೃಷ್ಠಿಸುತ್ತಾರೆ. ಒಂದು ಕಣ್ಣಿಗೆ ಬೆಣ್ಣೆ ಇನ್ನೊಂದು ಕಣ್ಣಿಗೆ ಸುಣ್ಣ ಎರಚುವ ಸೂಕ್ಷ್ಮ ಗುಣವುಳ್ಳವರು ಇದ್ದಾರೆ. ಅವರ ಮುಂದೆ ಬುಧ್ಧಿವಾದ ಹೇಳುವುದಕ್ಕಿಂತ, ಶ್ವಾನನ ಮುಂದೆ ಕಿನ್ನರಿ ಬಾರಿಸುವುದಕ್ಕಿಂತ, ನಾವೆ ಜಾಣರಾಗಿ ಬದುಕಬೇಕು. ನಮ್ಮ ಮನಸ್ಸನ್ನು ದುಸುಮಾನ್ರ ಕೈಯಾಗ ಕೊಡುವುದಕ್ಕಿಂತ, ಅವರ ಗೆಳೆತನ ಮಾಡಿ ಶ್ರೇಷ್ಠರಾಗಿ, ಉತ್ತಮ ಗುಣ ಇರುವ ವ್ಯಕ್ತಿಯಾಗಿ ಬಾಳಬೇಕು.

ಪುರುಷನಾದವನಿಗೆ ಸಂಬಂಧಗಳ ಪರಿಕಲ್ಪನೆ ಇರಬೇಕು. ಕಂಡ ಹೆಣ್ಣುಗಳಿಗೆ ಮನಸೋತು, ಎಲ್ಲವು ಭೋಗದ ವಸ್ತುಗಳೆಂದು ತಿಳಿಯುವುದು ಸಭ್ಯರ ಲಕ್ಷಣವಲ್ಲ. ಪರಸೊತ್ತಿಗೆ ಆಸೆ ಪಡಬಾರದು.

ಸಂಸ್ಕೃತಿಯ ಆಚಾರ, ವಿಚಾರ, ವಿಧಿವಿಧಾನಗಳು, ಮದುವೆ ಸಂಭ್ರಮದ ಪದ್ಧತಿಗಳು, ರೂಢಿ ಸಂಪ್ರದಾಯ, ಸಾಮಾಜಿಕ ಸ್ಥಾನಮಾನ, ದೇಶಿಯ ನೆಲೆಯ ಉಳಿವು ನಮ್ಮನ್ನೆಲ್ಲಾ ಹಿಂದಿನ ಕಾಲಕ್ಕೆ ಕೊಂಡೊಯ್ಯುತ್ತವೆ. ಅಂದು ಮದುವೆ ಕಾರ್ಯಕ್ರಮ ಹಮ್ಮಿಕೊಂಡರೆ ಸಾಹಿತ್ಯದ ಹಾಸುಹೊಕ್ಕಿನಲ್ಲಿ ಪದಗಳನ್ನು ಆಡುತ್ತಿದ್ದರು. ಮದುವೆ ಸಂಭ್ರಮವೆಂದರೆ ಒಂಭತ್ತು ದಿನಗಳ ಕಾಲ ಆಚರಣೆಯಾಗಿತ್ತು. ಇಡೀ ಊರಿಗೆ ಊರೆ ಸಂಭ್ರಮ, ಸಡಗರ, ಗದ್ದಲದಿಂದ ಝುಂಕರಿಸುತ್ತಾ, ಪದಗಳನ್ನು ಹಾಡುತ್ತಾ ಹೆಣ್ಣು ಮಗಳ ಮದುವೆ ಮಾಡುತ್ತಿದ್ದರು.

ಮದುವೆಯಾಗುವ ನಾರಿ ಮಲ್ಲಿಗೆ ದಂಡೆ ಮುಡಿದು, ತೆಂಗಿನ ಗರಿಯ ಹಂದರ, ಬಾಳೆ ಕಂಬದ ತೋರಣಗಳಿಂದ ಅಲಂಕರಿಸಿದ ಮಂಟಪದಲ್ಲಿ 'ನಾರಿ'ಯ ವೈಯಾರ ಝುಂಕರಿಸುತ್ತಿತ್ತು.

ಮದುವೆಯ ಪದ್ಧತಿಯಂತೆ ಕರಿಯ ಕಂಬಳಿಹಾಕಿ, ಸುರಗಿ ಸುತ್ತಿ ಅಣ್ಣನ ಮುಯ್ಯಿಗಾಗಿ ತಂಗಿ ಕಾಯುತ್ತಿದ್ದಾಳೆ. ಅಲ್ಲದೆ ಭಾವ, ಮೈದುನರ ಚಮತ್ಕಾರದ ಆದರ್ಶ ಗುಣವನ್ನು ವರ್ಣಿಸುತ್ತಾಳೆ.

ಸಂಗಣ್ಣನವರ ಶ್ರಮ ಫಲದಿಂದ ಬಳ್ಳಾರಿ ಜಿಲ್ಲೆಯ ಬಯಲು ಸೀಮೆಯ ನಾಡಿನ ವೇಷ-ಭೂಷಣದ ಪದಗಳ ರಚನೆ, ಜನಪದರ ಜೀವನಶೈಲಿ, ತಿಳಿದುಕೊಳ್ಳಲಾಗಿದೆ. ಮನುಷ್ಯನು ಅಲಂಕಾರವಾಗಿ ಕಾಣಬೇಕಾದರೆ ಬಟ್ಟೆಗಳ ಶುಚಿತ್ವ ಮುಖ್ಯ. ಬಟ್ಟೆಗಳ ಸ್ವಚ್ಛತೆ ಕಾಪಾಡುವವನು ಮಡಿವಾಳ ಮಡಿವಾಳನನ್ನು ಕುರಿತು ಮಹಿಳೆ ಹೀಗೆ ಹೇಳುತ್ತಾಳೆ.

"ಯಾಕಪ್ಪ ನನಸೀರಿ ಯಾಲಕ್ಕಿನಾತ

ಏನಿಕ್ಕಿ ಒಗೆದೋ ಮಡಿವಾಳ? ಬಟ್ಟೆಲ್ಲ

ಕ್ಯಾದಿಗಿ ಪೆಳಿಯ ತಿಳಿನೀರು"[೫]

ಅಣ್ಣನ ಮಗನ ಮದುವೆಗಾಗಿ ಹೊನ್ನು ಕೊಟ್ಟು ನೇಯ್ಸಿದ ಬಟ್ಟೆಯನ್ನು ಜೋಪಾನವಾಗಿ ಕಾಯ್ದಿರಿಸಿದ್ದಾಳೆ. ಹಿಂದಿನ ಕಾಲದಲ್ಲಿ ಮದುವೆ ಕಾರ್ಯಗಳು ಸುಲಲಿತವಾಗಿ ನಡೆಯಬೇಕಾದರೆ, ಬಳಿ, ಜಂತರದ ತುರುಬು, ಮುತ್ತು, ಕಾಲುಂಗುರ, ಕೋಟು, ಪೇಟ, ಬಂದಿ, ಬೆಂಡಾಲಿ, ಜರತಾರ, ಮುಮ್ಮಲಿ ಸರಗಳಿಂದ ಕೂಡಿದ ಅಲಂಕೃತಗೊಂಡ ಆಭರಣಗಳು ಇರಲೇ ಬೇಕಿತ್ತು. ಆ ಆಭರಣಗಳ ಮೇಲೆ ಮಹಿಳೆಯರ ಸೌಂದರ್ಯವನ್ನು ಪದಗಳನ್ನು ಕಟ್ಟಿ ವರ್ಣಿಸುತ್ತಿದ್ದರು.

ಅಂದಿನ ಕಾಲದ ಜನಪದರು ಹೆಚ್ಚು ಅನಕ್ಷರಸ್ಥರಾಗಿದ್ದರು. ಆದರೆ ಬಾವಿಯೊಳಗಿನ ಕಪ್ಪೆ ಅಲ್ಲಾ, ದೇಶದ ದಿಕ್ಕುಗಳ ಅರಿವಿನ ಜ್ಞಾನವುಳ್ಳವರು. ಬಳ್ಳಾರಿ ಜಿಲ್ಲೆಯ ಕಂಪ್ಲಿ, ತಂಬ್ರಳ್ಳಿ, ಹಂಪೆ ಹಾಗೂ ಹುಬ್ಬಳ್ಳಿಯಂತಹ ಸ್ಥಳಗಳ ಪರಿಚಯವಿತ್ತು. ಆ ಸ್ಥಳದ ಮಹಿಮೆಯನ್ನು ಜಾನಪದರು ಹಾಡಿನ ಮೂಲಕ ವರ್ಣಿಸುತ್ತಿದ್ದರು. ಹಂಪೆಯ ದೌಲತ್ತಿನ ಸಿರಿಯನ್ನು ಜನಪದರು ಅರಿತ್ತಿದ್ದರು. ಜನಪ್ರಿಯಗೊಂಡ ಹಂಪೆಯ ಉದ್ದನ್ನ ವೀರಭದ್ರ ಬಗ್ಗಿದರೆ ಬಸವಣ್ಣ, ತೆಗ್ಗಿನಾಗಿರುವ ವಿರೂಪಾಕ್ಷ ಈ ಗುಡಿ ಮುಂದೆ ಗದ್ದಲಿಸಿ ಹಾವಿನೋಪಾದಿಯಲ್ಲಿ ಅರಣ್ಯವೇ ನಡುಗುವಂತೆ ಡೊಂಕು, ಡೊಂಕಾಗಿ, ದಿಕ್ಕನ್ನು ತೋಚುವಂತೆ ತುಂಗಭದ್ರ ನದಿಯೂ ಹರಿಯುತ್ತದೆ.

ಹಳ್ಳಿಯ ಪದಗಳಲ್ಲಿ ಆಡುವ ಮಕ್ಕಳ ಸ್ಥಿತಿ ಮತ್ತು ಹೆಣ್ಣಿನ ಬಿಂಕವನ್ನು ವರ್ಣಿಸಲಾಗಿದೆ. ಮಕ್ಕಳು ಸಂಜೆ ಬೀದಿಯಲ್ಲಿ ಆಡುತ್ತಾರೆ. ಆ ಸಮಯದಲ್ಲಿ ದನಗಳು ಬರುತ್ತವೆ. ಅರಿವಿಲ್ಲದೆ ಮಕ್ಕಳನ್ನು ತುಳಿದು ಬಿಡುತ್ತವೆ. ಆದರೆ ಮಕ್ಕಳಿಗೆ ಅದರ ಪರಿಕಲ್ಪನೆಯೇ ಇರುವುದಿಲ್ಲ. ಏನು ಅರಿಯದ ಮುಗ್ಧ ಜೀವಿಗಳು, ಬಿಸಿಲು, ಮಳೆ, ನೀರು, ಹಸಿವು ಎನ್ನದೆ ಆಟದಲ್ಲಿ ತಲ್ಲೀನರಾಗುತ್ತಾರೆ. ಮಗುವಿನ ಬಗ್ಗೆ ಕಾಳಜಿ ಇಲ್ಲದ ತಾಯಿಯನ್ನು ಕುರಿತು "ಜಂಭದ ಗೌರಿ ಮಗಳನ್ನು ಕಾಪಾಡು" ಎಂದು ಮನೆ ಯಜಮಾನಿ ಎಚ್ಚರಿಕೆ ನೀಡುತ್ತಾಳೆ. ಮನೆ ತುಂಬಾ ಮಕ್ಕಳು ಹಾಡುತ್ತಾ, ಕುಣಿಯುತ್ತಿದ್ದರೆ ಹಸನದ ಹೊಸನಾತದ ಪರಿಮಳ ಮನೆ ತುಂಬಾ ಚಲ್ಲುತ್ತದೆ.

ಜನಪದ ಹಾಡುಗಾರರು ತಾಯಿ, ಮಗ, ಮಗಳ ಮೇಲೆ ಪದಗಳನ್ನು ಕಟ್ಟಿ ವರ್ಣಿಸಿ ಹೇಳಿದ್ದಾರೆ. ಪ್ರಕೃತಿಯ ಸೌಂದರ್ಯದ ವರ್ಣನೆಯನ್ನು ಇಂಪಾದ ಗಾನದಲ್ಲಿ ಸವಿದಿದ್ದಾರೆ. ಮುಕ್ಕಣ್ಣ ನೆವಣಿ ಬೆಳೆದು ಕಣದಲ್ಲಿ ರಾಶಿ ಮಾಡಿದ್ದಾನೆ. ಬೆಳದಿಂಗಳ ಚಂದ್ರನ ವೈಭವದಲ್ಲಿ ನೆವಣಿರಾಶಿಯ ಮೇಲೆ ಬೆಕ್ಕಿನ ಚೆನ್ನಾಟ, ತನ್ನ ಮಕ್ಕಳೊಂದಿಗೆ ನಲಿಯುತ್ತಿದೆ. ಅದರಂತೆ ತಾಯಿಯ ವಾತ್ಸಲ್ಯವು ಮಗನ ಬಂಗಾರದ ಚೆಲುವಿನಂತೆ ಮುಖ ಕಮಲದಂತೆ ಅರಳುತ್ತಿದೆ. ಗಿಡ ಮರಗಳ ಸೌಂದರ್ಯ, ಹಕ್ಕಿ ಪಕ್ಷಿಗಳ ಕಲರವ ನಮಗೆ ಇಂಪಾಗಿ ಕೇಳಿಸುತ್ತಿದೆ. ಆದರೆ ಪ್ರಕೃತಿಯ ಮಡಿಲಲ್ಲಿ ಹರಿಯುವ ನೀರು ಎಲ್ಲಾ ಕಡೆಗೂ ತುಂಬಿ, ಬೇರೆಲ್ಲೂ ಸ್ಥಳವಿಲ್ಲದೆ ತೆಂಗಿನ ಕಾಯಿ, ಬಾಳೆಯ ಒಳಗೆ ಮಲತು ಹರಿಯುತ್ತಿದ್ದಾಳೆ.

ಒಡ ಹುಟ್ಟಿದವರು ತಾಯಿಯ ಪ್ರೀತಿಯನ್ನು ಅಣ್ಣನಿಗಾಗಿ ಧಾರೆಯೆರೆದಿದ್ದಾರೆ. ಅಣ್ಣನ ಮುಂಬಾರದ ಎತ್ತನ್ನು ಎಳೆಯುವ, ಬದುಕನ್ನು ರೂಪಿಸಲು ಅಕ್ಕ ತಂಗಿಯರೆ ತ್ಯಾಗಿಗಳಾಗಿದ್ದಾರೆ. ಆದರೆ "ಬೆಳ್ಳಿಯ ಬಾರ್ಕೋಲನ್ನೆ ಮರೆತ ಅಣ್ಣನು" ದೊರೆಯಾಗಿ ಮೆರೆಯುತ್ತಿದ್ದಾನೆ. ಇವನನ್ನು ಉನ್ನತ ಮಾರ್ಗದಲ್ಲಿ ನಡೆಯುವಂತೆ ಮಾಡಲು ಐದು ಮಂದಿ ಅಕ್ಕ ತಂಗಿಯರು ಎಳ್ಳು ಬೆರೆತ್ಹಂಗ ಒಂದು ಗೂಡಿದ್ದಾರೆ. ಅಲ್ಲದೆ ಕೇಳಿದ್ದನ್ನು ಕೊಡುವ ಸಿರಿತನ ಅಣ್ಣನಗಿದೆ. ಆದರೆ ಅತ್ತಿಗೆಯ ಚಾಡಿ ಮಾತಿಗೆ ಮರುಳಾಗಿದ್ದಾನೆ ಅಷ್ಟೇ. ಅಂತಹ ಅಣ್ಣನನ್ನು ಕಳೆದು ಕೊಳ್ಳಲು ಇಷ್ಟವಿಲ್ಲ.

"ಮೂಗುತಿ ಮುರಿದರ ಮರಳಿ ಮಾಡಿಸಬಹುದು

ಮಡದಿ ಸತ್ತರ ತರಬಹುದು। ಶಿವಶಿವ

ಒಡಹುಟ್ಟಿದವರ ಪಡಿಬೇಕು"[೬]

ಲೋಕವನ್ನು ಆಳುವ ತಮ್ಮ ಸೋಮಣ್ಣ ಮೂಗ್ತಿಗೆ ಮುತ್ತನ್ನೆ ಕಳುಹಿಸುತ್ತಾನೆ. ಅದಕ್ಕೆ ಕಣ್ಣೀರು ಸುರಿಸುವ ಅಗತ್ಯವಿಲ್ಲ ಎಂದು ಧೈರ್ಯವನ್ನು ತುಂಬುವ ಹೃದಯವಂತಿಕೆ ಜನಪದರ ಹಾಡುಗಳಲ್ಲಿ ಕಾಣುತ್ತೇವೆ.

ಒಂದು ಕಡೆ ಪ್ರೀತಿ ಅಂದರೆ ಇನ್ನೊಂದು ಕಡೆ ಅದನ್ನು ಸುಡುವ ಕುಂದು ನುಡಿಯುವವರಿದ್ದಾರೆ. ಈ ಸಮಾಜದಲ್ಲಿ ಪ್ರೀತಿಗಿಂತ ವೈಷಮ್ಯದಿಂದ ಕೂಡಿರುವವರೆ ಹೆಚ್ಚಿದ್ದಾರೆ. ಅವರ ಮಧ್ಯೆ, ಗಂಧ,

ಕುಂಕುಮದ ಚೆಂದದಂತೆ ಸುಂದರವಾಗಿ ಗಂಡ ಹೆಂಡತಿಯರು ಬಾಳಬೇಕು ದಿನನಿತ್ಯ ಕತ್ತಲು ಬೆಳಕು, ರಾತ್ರಿ, ಹಗಲು ಸಹಜವಾಗಿ ನಡೆಯುವ ಕ್ರಿಯೆ. ಹಾಗೆಯೇ ಒಳ್ಳೆಯವರು, ಕೆಟ್ಟವರು ಭೂಮಿಯ ಮೇಲೆ ಇದ್ದೆ ಇರುತ್ತಾರೆ. ಆ ರಾತ್ರಿಯ ಸಮಯದಲ್ಲಿ ಕತ್ತಲು ಗವಿದಿರುತ್ತದೆ. ಆಗ ದೀಪದ ಬೆಳಕನ್ನು ಹಚ್ಚಿಕೊಂಡು ಜೋಪಾನವಾಗಿ ಹೋಗಬೇಕು. ಇಲ್ಲದಿದ್ದರೆ ಜಾಲಿಯ ಮರದಂತೆ, ಬದುಕು ಸಾಗಿಸಬೇಕಾಗುತ್ತದೆ. ಜೀವನದ ಬಂಡಿಯ ಜೀಕಿನ ಶಬ್ದಕ್ಕೆ ಮನಿಯನಾಯಿ ಸಹ ಬೋಗಳುತ್ತದೆ. ಇಲ್ಲಿ ಸಾಮಾಜಿಕ ಅರಿವಿನ ಪ್ರಜ್ಞೆಯನ್ನು ಮೂಡಿಸಲಾಗಿದೆ. ಮನುಷ್ಯ ಎಂದ ಮೇಲೆ ಹಸಿವು, ಪ್ರೀತಿ, ದೈವದ ಭಕ್ತಿ ಇರುತ್ತದೆ. ಹಾಗೆಯೇ ಸುಂದರವಾದ ಕನ್ಯೆ ಹೋಣೆಯಲ್ಲಿ ಹೋಗುವಾಗ ನಿಲ್ಲಿಸಿ ಅವಳ ಬೆಡಗನ್ನು ಕೇಳುವುದು. ಹಸಿವಾಗಿದೆ ಎಂದು ಪಂಚಾಮೃತಕ್ಕೆ ಕೈಹಾಕುವುದು ಸಮಂಜಸವಲ್ಲ.

ಗ್ರಾಮೀಣ ಪ್ರದೇಶದಲ್ಲಿ ದೊರೆತನ ಹೊತ್ತ ಕೊಟ್ರಣ್ಣನ ಸುಗಂಧ ದ್ರವ್ಯಕ್ಕೆ 'ಸೂಳಿ' ಒಲಿದಿದ್ದಾಳೆ. ಅಷ್ಟೇ ಅಲ್ಲದೆ ಆ ಕಾಮಣ್ಣನ ಚೆಲುವಿಗೆ ರಮಣೀಯರು ರಸ್ತೆಯಲ್ಲಿ ತರುಬುತ್ತಾರೆ. ಅಂತಹ ಸೌಂದರ್ಯವುಳ್ಳ ಪತಿರಾಯನು ತನ್ನ ಮಡದಿಗೆ ಬಿತ್ತುವುದನ್ನು ಕಲಿಸಿದ್ದಾನೆ. ಇಂತಹ ಚಂದ್ರನ ಗುಣಗಳುಳ್ಳ ಪತಿರಾಯನನ್ನು ಮರೆತು ಅರಗಳಿಗೆ ಇರಲಾರೆ ಎಂದು ವರ್ಣಿಸುತ್ತಾಳೆ.



ಇಂತಹ ಹೆಂಡತಿಯು ಮಕ್ಕಳನ್ನು ಹಡೆದು ಸಾಕಿ ಸಲುವುತ್ತಾಳೆ. ಆ ಮಕ್ಕಳಿಗೆ ತಾಯಿಯಾಗಿ ಆಶ್ರಯ ನೀಡುತ್ತಾಳೆ. ಅವರು ತಿಂದು ಬಿಟ್ಟ ಹಳಸಿದ ಅನ್ನವು ಹಕ್ಕಿ ಪಕ್ಷಿಗಳಿಗೆ ನೆರವಾದಂತೆ, ತೊಂಡಿಯ ಬಳ್ಳಿ ಮರದ ಆಶ್ರಯದಲ್ಲಿ ಹಬ್ಬಿ ಬೆಳೆಯುತ್ತದೆ. ಆ ಸರಪಳಿಯಂತೆ ಒಂದಕ್ಕೊಂದು ಆಶ್ರಯ ಪಡೆದು ಬದುಕಬೇಕು. ಇವುಗಳೆಲ್ಲವನ್ನು ಹೊತ್ತು ನಿಂತವಳು ತಾಯಿ.

ಹತ್ತು ಗಂಡು ಮಕ್ಕಳನ್ನು ಹಡೆದ ತಾಯಿಯನ್ನು ಬಂಜೆ ಎಂದು ಕರೆಯಲು ಸಾಧ್ಯವಿಲ್ಲ, ಬಂಜೆಯ ಮನೆಯಲ್ಲಿ ಬಂಗಾರದ ನೆಲ ಒಳ್ಳು ಇದ್ದರೆ, ಅದನ್ನು ಕುಟ್ಟಾಕ ಸೊಸಿ ಇಲ್ಲ. ಸುಟ್ಟ ರೊಟ್ಟಿಗಳನ್ನು ಮುರಿದು ಉಣ್ಣಾಕ ಮಗ ಇಲ್ಲ. ಮಕ್ಕಳಿಲ್ಲದೆ ಮನೆ ಸ್ಮಶಾನಕ್ಕೆ ಸಮನಾಗಿ ಕಾಣಿಸುತ್ತದೆ. ಆದ್ದರಿಂದ ತಾಯಿಯ ಮಹತ್ವದ ವೈಚಾರಿಕ ತತ್ವವನ್ನು ಸಾರುತ್ತದೆ.

ಮುದೇನೂರು ಸಂಗಣ್ಣನವರು "ಹಳ್ಳಿಯ ಪದಗಳಲ್ಲಿ ಅತ್ತೆ-ಸೊಸೆಯರ ನಡುವಿನ ಸಂಭಾಷಣೆಯ ಪದಗಳನ್ನು ಸಂಗ್ರಹಿಸಿದ್ದಾರೆ. ಇವರಿಬ್ಬರ ನಡುವೆ ನಡೆಯುವ ತರ್ಕ, ವಾದ ನಾವೀನ್ಯತೆಯಿಂದ ಕೂಡಿದೆ. "ನಿಲುಗಲ್ಲು ದುರ್ಗದ ಸೊಸೆ," ಮಣ್ಣಿನ ಕೊಡಪಾನದಲ್ಲಿ ನೀರು ತರುವಾಗ ಮಾವಿನ ಕಸುಗಾಯಿ ಬಿದ್ದು ಒಡೆದಿದೆ. "ಕೊಡಪಾನ ಏಕೆ ಒಡಿತು" ಎಂದು ಅತ್ತೆ ಕೇಳಿದಾಗ ಸೊಸೆಯು "ಚಿನ್ನ, ಹೊನ್ನಿನ ಕೊಡವಲ್ಲ," ಮಣ್ಣಿನ ಕೊಡಪಾನಕ್ಕೆ ಯಾಕೆ ತಕರಾರು, ನಮ್ಮಪ್ಪಗೆ ಹೇಳಿ ತರಿಸಿ ಕೊಡುತ್ತೇನೆ.

"ಅಪ್ಪನ ಹೆಸರ್‍ಯಾಕೆ ಇದಕ್ಕಾಗಿ ಸೊಸಿ ಮುದ್ದೆ
ನಿನ್ನ ಕೊಳ್ಳಾಗಳ ಪದಕವ। ತಗೊಂಡು
ಇನ್ನೊಬ್ಬ ಸೊಸಿಯ ತರುವೇನ"[೭]

ಅತ್ತೆ ಮಾತುಗಳಿಗೆ ಹೆದರದೆ ಧೈರ್ಯದಿಂದ ಸೊಸೆಯು 'ನಾ' ಮುಡಿದ ಪೂವು (ಹೂವು) ಬಾಡಿ ಬತ್ತಿ ಹೋಗಿದೆ. ಅದರಿಂದ ಅಂಜಿಕೆ ನನಗೆ ಇಲ್ಲ. ದವನದ ಸಿರಿಯನ್ನು ಅನುಭವಿಸಿದ್ದೇನೆ. ತನ್ನ ಸ್ಥಾನವನ್ನು ಯಾವ ಜಾಣೆ ಅಲಂಕರಿಸಿದರೇನು? ಇಲ್ಲಿ ಸೊಸೆಯ ಸೂಕ್ಷ್ಮ ಪ್ರತಿಭಟನೆಯನ್ನು ಕಾಣುತ್ತೇವೆ.

ಕೃಷಿಕನಾದ ರೈತನು ಹೊಳೆಸಾಲಿನ ಹೊಲಕ್ಕೆ ಹೊನ್ನನ್ನು ಬಿತ್ತಿ ಬರುವ ಸಂದರ್ಭದಲ್ಲಿ ಹದಿವಯಸ್ಸಿನ ಚದುರೆಯ ಮೋಹದಲ್ಲಿ ಸಿಲುಕಿಕೊಂಡನು. ಆ ಇದಿಮಾಯಿ ಜೊತೆಗೆ ಎಂಟೆತ್ತು ಕಟ್ಟಿಕೊಂಡು ಬಿತ್ತಿದ ಬೆಳೆ ಫಲ ನೀಡಿದೆ. ಹಾಗೇಯೇ ಹದಿವಯಸ್ಸಿನ ಗೆಳತಿಯ ಹೊಟ್ಟೆಯಲ್ಲಿ ಬಂಟನಂತ ಮಗ ಹುಟ್ಟಿದನು. ಆ ಬಸವನಂತ ಮಗನು ಸುಗ್ಗಿಯ ಸಮಯದಲ್ಲಿ ಕಣದಲ್ಲಿದ್ದ ರಾಶಿಯ ಧೂಳನ್ನು ಗಗನಕ್ಕೆ ಚುಂಬಿಸುವಂತೆ ತೂರಿದನು. ಹೀಗೆ ರೈತರು ಸುಗ್ಗಿಯ ದವಲತ್ತಿನ ಸಿರಿಯಲ್ಲಿ ಕಣದ ಹಂತಿ ಪದಗಳನ್ನು ಕಟ್ಟಿಹಾಡುತ್ತಾ ಕುಣಿಯುತ್ತಾರೆ. ಹೀಗೆ ಕುಣಿಯುವಾಗ ಹಾಲು ನೆವಣಿಯ ವೈಶಿಷ್ಟ ಮತ್ತು ಕಳ್ಳಿ ಬಿಳಿಹಾಲು ನಡುವಿನ ಸ್ವಾರಸ್ಯ ವಿವರಿಸುತ್ತಾರೆ. ಜೊತೆಗೆ ಎಳ್ಳಿನಲ್ಲಿರುವ ಎಣ್ಣೆ ಉಪಯೋಗವಿದೆ. ಆ ಎಳ್ಳನ್ನೆ ಹೋಳಿಗೆ ಮಾಡಿ ತೆಳ್ಳನ ಗೆಳತಿ ನೀಡುತ್ತಿದ್ದಾಳೆ.

ಹೀಗೆ ಅತಿ ಸೂಕ್ಷ್ಮವಾದ ವಿಚಾರಗಳನ್ನು ಜನಪದರು ಪದಗಳನ್ನು ಕಟ್ಟಿ ಹಾಡುತ್ತಾರೆ. ಅಲ್ಲದೆ ಸ್ವಾತಂತ್ರ್ಯದ ಭವಿಷ್ಯ ಮತ್ತು ದೇಶದ ಮೇಲಿನ ಪ್ರೀತಿಯನ್ನು ಪದಗಳ ಮೂಲಕ ವ್ಯಕ್ತಪಡಿಸುತ್ತಾರೆ. ಬ್ರಿಟಿಷರ ದಬ್ಬಾಳಿಕೆಯನ್ನು ಖಂಡಿಸುತ್ತಾರೆ. ಅದರಿಂದ ಕಿತ್ತೂರು ಕೋಟೆ ಪರಕೀಯರ ಬೂಟಾಟಿಕೆಯಲ್ಲಿ ಸಿಕ್ಕು ರಕ್ತದ ಮಡುವಿನಲ್ಲಿ ಬಳಿದಿದೆ. ಅದನ್ನು ವಿರೋದಿಸಿದ ರಾಯಣ್ಣನನ್ನು ಬಿಳಿಯ ದಂಡು ಕೊಂದು ಹಾಕಿತು. ಆ ಬಿಳಿ ಕೋತಿಗಳ ಅಟ್ಟಹಾಸ ಭಾರತದಲ್ಲಿ ಮಿತಿ ಮೀರಿ ಹೋಗಿದೆ. ಅದಕ್ಕೆ ಕೊನೆ ಎಂಬುದು ಇಲ್ಲವೇ? ಹೀಗೆ ಚಿಂತೆಗೊಳಗಾದಾಗ ಜನಪದರು ಹನ್ನೆರಡನೆಯ ಶತಮಾನದ ಬಸವಣ್ಣನನ್ನು ನೆನಪು ಮಾಡಿಕೊಳ್ಳುತ್ತಾರೆ.

"ಬಸವಣ್ಣ ಬಂದಾನು ರಣರಂಗಕ್ಕಿಳಿದಾನು
ದಂಡಿಲ್ಲದೆ ಯುದ್ಧ ನಡಿಸ್ಯಾನು। ಬಿಳಿಯರ
ಆಚೆಯ ದಂಡೇಗೆ ಕಳಿಸ್ಯಾನು"[೮]

ಬಸವಣ್ಣ ಮುಂದೊಂದು ಕಾಲಗಳಲ್ಲಿ ಮತ್ತೊಮ್ಮೇ ಹುಟ್ಟಿ ಬರುತ್ತಾನೆ. ಶಾಂತಿಯುತವಾಗಿ ಯುದ್ಧ ಮಾಡಿ ಬಿಳಿಯರನ್ನು ಈ ದೇಶದಿಂದಲೇ ಓಡಿಸುತ್ತಾನೆ. ಇಲ್ಲಿ ದೇಶ ಸೇವೆ, ನಿಷ್ಠೆ, ಪ್ರೀತಿ ಹಾಗೂ ಸ್ವಾತಂತ್ರ್ಯ ಹೋರಾಟದ ಧ್ವನಿ ಇದೆ.

ಹಳ್ಳಿಯ ಪದಗಳಲ್ಲಿ ಹಳೆಯ ಕಾಲದ ಕೋಲಾಟದ ಪದಗಳ ಸ್ವಾರಸ್ಯ ಮತ್ತು ಪದ್ಧತಿಯನ್ನು ತಿಳಿದುಕೊಳ್ಳಲಾಗಿದೆ. ಹಸಿರು ಎಲೆಯಲ್ಲಿ ತಿಳಿ ನೀರಿನ ಅಂಶವಿದೆ. ಅದನ್ನು ಹೀರಿ ದಾಹ ತೀರಿಸಿಕೊಳ್ಳಲು ಗಿಳಿ ಹಿಂಡು ಬರುತ್ತದೆ. ಆ ಗಿಳಿ ಹಿಂಡನ್ನು ನೋಡಿದ ಗಿಡ್ಡ ಹುಡುಗ ರೊಡ್ಡ ಬಡಿಗೆಯಲ್ಲಿ ಹೊಡೆದನು.

ಆ ಬಡಿಗೆಯನ್ನು ಕೆತ್ತಿದವನು ಬಡಿಗೇರಣ್ಣ, ಆತನಿಗೆ ಉಳಿ ಬಾಚಿ ತಯಾರಿಸಿ ಕೊಟ್ಟವನು ಕಮ್ಮಾರಣ್ಣ, ಕಮ್ಮಾರಣ್ಣನ ಮನೆ ಮುಂದೆ ಬ್ರಹ್ಮದೇವ ಸೃಷ್ಠಿಯಾಗಿದ್ದಾನೆ. ಆ ದೇವರನ್ನು ಪೂಜೆ ಮಾಡುವವನು ದಾಸಪ್ಪ. ಈತನು ಕೈಯಲ್ಲಿ ಚೌನಸಿ ಹಿಡಿದು ಕೋಲು ಕೋಲು ಎನ್ನುತ್ತಾ ಕುಣಿಯುತ್ತಿದ್ದಾನೆ.

ಆ ಕೋಲು ಕುಣಿಯುವ ಬಂಜೇರು ಬಾವಿ ನೀರಿಗೆ ಹೋಗಿ ಅಲ್ಲಿಯೇ ಮರಗಳಾಗಿ ನಿಂತರು. ಸುಂದರವಾದ ಆ ಮರವನ್ನು ಬಡಿಗೇರಣ್ಣ ನೋಡಿ ಕಡಿದು, ಕೆತ್ತಿ, ತೊಟ್ಟಿಲು ಮಾಡಿ, ಸಂತಿ ಪ್ಯಾಟೆಗಿಟ್ಟನು. ಮಕ್ಕಳಿದ್ದಂತವರು ತೊಟ್ಟಿಲು ನೋಡಿ ಖರೀದಿ ಮಾಡಿ, ಮನೆಯ ಪಡಸಾಲ್ಯಾಗ ಇಟ್ಟು; ಮಗುವನ್ನು ತೂಗ್ತಾ, ಜೋಗುಳ ಹಾಡ್ತಾ "ಕೋಲು ಕೋಲೆ" ಎಂಬ ರಾಗ ಹಾಡಿದರು. ಭೂಮಿಯಲ್ಲಿ ಹುಟ್ಟಿದ ಪ್ರತಿಯೊಂದು ವಸ್ತುಗಳು ಉಪಯೋಗವಾಗುತ್ತವೆ. ಯಾವುದು ತ್ಯಾಜ್ಯವಲ್ಲ ಎನ್ನುವ ಸಂದೇಶ ಇಲ್ಲಿದೆ.

ಹರನಿಗೆ ಭಕ್ತಿಯಿಂದ ಕೈ ಮುಗಿದು ಹಸನ ಮಾಡಿದ ಹಕ್ಕಿಯನ್ನು, ಗಂಗಾಧರನ ಮಡದಿ ಗಂಗೆಯ ಮಡಿಕ್ಯಾಗ ಹಾಕಿ ಅನ್ನವನ್ನು ಬೇಯಿಸಬೇಕು. ಮಠದ ಜನರನ್ನು ಕರೆಸಿ ಪಂತಿಯ ಊಟವನ್ನು ನೀಡಬೇಕು. ಆ ಎಡೆಯನ್ನು ಹಸಿದವರಿಗೆ ನೀಡಿ ಶಿವನನ್ನು ಪೂಜಿಸಿದರೆ "ಸಾಯುಜ್ಯ ಪದವಿ" ಸಂಗಡಲೆ ದೊರಕುತ್ತದೆ. ಹೀಗೆ ಉಪಕಾರದ ಕಾಯಕದಲ್ಲಿ ನಿರಂತನಾದವರಿಗೆ ಮುಕ್ತಿ ದೊರಕುತ್ತದೆ.

ಕೃಷಿಯಲ್ಲಿ ಬಿತ್ತಿ ಬೆಳೆದ ಜೋಳದ ತೆನೆಯ ಕಾಳುಗಳನ್ನು ಹೀಗೆ ಬೇರ್ಪಡಿಸುತ್ತಿದ್ದರು ಎಂಬುದನ್ನು ಹಳ್ಳಿಯ ಪದಗಳಲ್ಲಿ ವಿವರಿಸಲಾಗಿದೆ. ಕಣದಲ್ಲಿ ಹರಡಿ, ಬಸವನನ್ನು ಕಲ್ಲಿಗೂಡಿ, ಕೊಳ್ಳರಿದು, ಹಸಿಯ ಮೇವನ್ನು ಹಾಕುತ್ತಿದ್ದರು. ಕೈಯಿಂದ ಬಸ-ಬಸನೆ ಹಸನಾದ ಕಂಕಿಯನ್ನು ತೆಗೆದು ಕ್ಷಣದಲ್ಲಿ ಜೋಳದ ರಾಶಿ ಮಾಡಿದರು. ಆ ರಾಶಿ ಶ್ರೀಶೈಲ ಸಿಕರಕ್ಕೆ ಸಮನಾಗಿ ಕಂಡಿತು. ಅದನ್ನು ಮೋಸಗಾರರು ನೋಡಿ ಆಡಿಕೊಳ್ಳುತ್ತಾರೆ. ಬೆಳೆದ ಕಾಳುಗಳನ್ನೆಲ್ಲಾ ಜನರು ಮೋಸದ ಅಂಗಡಿಗೆ ಮಾರಿಕೊಳ್ಳುತ್ತಾರೆ. ಕೊನೆಗೆ ಅನ್ನಕ್ಕೂ ಗತಿ ಇಲ್ಲದೆ ನಮ್ಮ ಮನೆಗೆ ಬಂದು ಕೇಳುತ್ತಾರೆ. ಆ ಸ್ಥಿತಿಯನ್ನು ಕಂಡು ಮರುಗಿ ದುಡಿದಿದ್ದನ್ನೆಲ್ಲಾ ಕೊಟ್ಟು, ಕಾಯಕ ನಿರತನಾಗಿ, ಸನ್ಮಾನದಿಂದಲೇ ಶಿವನನ್ನು ಸೇರುತ್ತಾರೆ.

ಹಸಿವಿಗಾಗಿ ದುಡಿಯಬೇಕು. ದುಡಿದ ಕಾಳನ್ನು ಕಲ್ಲಿನಿಂದ ಬೀಸಿ ಹಿಟ್ಟನ್ನು ಮಾಡಿಕೊಳ್ಳಬೇಕು ಹಿಂದಿನಿಂದಲೂ ಬೀಸುವ ಪದ್ಧತಿ ಇತ್ತು. ಅದರಲ್ಲಿ ಹೆಚ್ಚು ಸ್ತ್ರೀಯರು ಭಾಗಿಯಾಗುತ್ತಿದ್ದರು. ಆ ಕೆಲಸದಲ್ಲಿ ಶ್ರದ್ಧೆ, ನಿಷ್ಠೆಯಿಂದ ಅರಿತು ಬಾಳಬೇಕು. ಅನ್ನ-ನೀರು, ಸಿರಿ-ಸಂಪತ್ತನ್ನು ಕೊಡುವವನು ಆ ದೇವ. ಅದನ್ನು ಅರಿತು ನಡೆಯಬೇಕು.

ಮುಗ್ಧ ಮಗುವಿಗೆ ಅರಿವಿನ ಪರಿಜ್ಞಾನ ಇರುವುದಿಲ್ಲ ಯಾವ ಸ್ಥಳದಲ್ಲಿ ಆಡಿ ಬಂದಿದೆ ಎಂಬ ಸೂಕ್ಷ್ಮತೆಯು ಇಲ್ಲ. ಅದನ್ನು ತಿಳಿಯುವುದು ತಾಯಿಯ ಕರ್ತವ್ಯ. ಅದರ ಅರಿವು ಪಕ್ಷಿಗಳಲ್ಲಿ ಇದೆ. ಒಂದು ಪಕ್ಷಿ ಹಾರಿ ಹೋದಾಗ ಇನ್ನೊಂದು ಪಕ್ಷಿ ಯೋಚಿಸುತ್ತದೆ. ಅದು ಏಕೆ ಹಾರಿ ಹೋಯಿತು. ಎಂಬ ಅರಿವಿನ ಸೊಲ್ಲು ತಿಳಿಯುವ ಮನುಷ್ಯತ್ವದ ಗುಣ.

ಮನುಷ್ಯ ಎಂಬುವವನು ಸ್ವಾರ್ಥಿಯಾಗಿದ್ದಾನೆ. ಎಲ್ಲವು ತನ್ನವೇ ಎಂಬಂತೆ ವರ್ತಿಸುತ್ತಾನೆ. ಆ ಸ್ವಾರ್ಥಮನೋಭಾವನೆಯನ್ನು ಮನಸ್ಸಿನಿಂದ ಅಳಿಸಿ ಹಾಕಬೇಕು. ಹೆಣ್ಣು, ಹೊನ್ನು, ಮಣ್ಣು ಇವುಗಳಿಗೆ ಆಸೆ ಪಡದೆ ಸರಳ ಜೀವಿಯಾಗಿರಬೇಕು. ತನ್ನ ಇಂದ್ರಿಯಾಸಕ್ತಿಗಳಿಗೆ ಬಲಿಯಾಗದೆ, ಮನುಷ್ಯನಾಗಿ, ಮನುಷ್ಯತ್ವದಿಂದ ಬದುಕುವುದು ಒಳಿತು.

### ೩.೨ ನವಿಲು ಕುಣಿದಾವ

ಮುದೇನೂರು ಸಂಗಣ್ಣನವರ ಮೊದಲ ಸ್ವತಂತ್ರ ಸಂಪಾದಿತ ಕೃತಿಯಾಗಿದೆ. ನೂರಕ್ಕೂ ಹೆಚ್ಚು ಪದಗಳ ಸಂಗ್ರಹವಾಗಿವೆ. ಬಳ್ಳಾರಿ ಚಿತ್ರದುರ್ಗ ಜಿಲ್ಲೆಯ ಕೆಲವು ಭಾಗಗಳಿಂದ ಜಾನಪದ ತ್ರಿಪದಿಗಳ ಸಂಗ್ರಹಿಸಿ "ನವಿಲು ಕುಣಿದಾವ" ಕೃತಿಯನ್ನು ಸಂಪಾದಿಸಿದ್ದಾರೆ. ಈ ಕೃತಿಯನ್ನು "ಜಂಗಮ ಜೋಗಿ'ಯಂತೆ ಊರೂರು ಅಲೆದು ಸಂಗ್ರಹಿಸಿದರು. ಅದರಲ್ಲೂ ಬಯಲು ಸೀಮೆಯ ಪರಿಸರವಾದ ಹರಪನಹಳ್ಳಿಯ ಸುತ್ತ ಮುತ್ತ ಹೇಳುವ, ಜನಪದ ಕಂಠಸ್ಥ ತ್ರಿಪದಿಗಳನ್ನು ಮೂಲ ಸೊಗಡಿನ ಆಡುಭಾಷೆಯಲ್ಲಿಯೇ ಸಂಗ್ರಹಿಸಿದ್ದಾರೆ.

ಸಿಂಪಿಲಿಂಗಣ್ಣನವರ ಗರತಿ ಹಾಡಿನಷ್ಟೇ ಉತ್ತಮಗುಣ ಮಟ್ಟದ ಸಂಪಾದಿತ ಕೃತಿಯಾಗಿದೆ.

ಗ್ರಾಮೀಣ ಜನಪದರ ಜೀವನ ತೂಗಿಸಲು ಆಶ್ರಯಿಸಿದ ಉಪಯುಕ್ತವಾದ ಮೂಲ ಕಸುಬುಗಳನ್ನು ಪರಿಚಯಿಸುತ್ತವೆ. ಕುರಿ, ಆಡು, ಪಶು, ಎಮ್ಮೆ ಮುಂತಾದವುಗಳಿಂದ ಹಾಲು ಉತ್ಪಾದನೆಯಾಗುತ್ತದೆ. ಆ 'ಹಾಲು' ಜನರ ಜೀವನವನ್ನು ವೃದ್ಧಿಸುತ್ತದೆ. ಹಾಲು ಎಂಬ ಕಥಾವಸ್ತುವಿನ ತ್ರಿಪದಿಗಳ ಸಂಗ್ರಹವನ್ನು ಒಟ್ಟುಗೂಡಿಸಿ 'ನವಿಲು ಕುಣಿದಾವ' ಸಂಕಲನ ಕೃತಿ ಸಂಪಾದಿಸಲಾಗಿದೆ.

ಗೀತ ಸಾಹಿತ್ಯದಲ್ಲಿ ಅಪಾರವಾದ ಅಭಿರುಚಿ ಬೆಳೆಸಿಕೊಂಡ ಸಂಗಣ್ಣನವರು ಜಾನಪದ ಕಾವ್ಯದತ್ತ ಕಣ್ಣು ವಾಲಿಸಿ ತ್ರಿಪದಿಯ ಪ್ರಕಾರದಲ್ಲಿ ಸಂಪಾದಿಸಿದರು. ಈ ತ್ರಿಪದಿಗಳೆಲ್ಲ ಸ್ತ್ರೀ ಕೇಂದ್ರಿತ ನೆಲೆಯಲ್ಲಿಯೆ ಹುಟ್ಟಿವೆ. ಹಳ್ಳಿಯ 'ಗರತಿ' ತನ್ನ ಜೀವನಾನುಭವದ ಅನುಭವಗಳನ್ನು ಅಭಿವ್ಯಕ್ತಪಡಿಸಿದ್ದಾಳೆ. ಅಲ್ಲದೆ ತನ್ನ ತೌರು ಮನೆ ಆರಾಧ್ಯ ದೈವ, ತಂದೆ, ತಾಯಿ, ಅಣ್ಣ, ತಮ್ಮ, ಅಕ್ಕ, ತಂಗಿ ಮಕ್ಕಳು, ಅತ್ತೆ, ಮಾವ, ಭಾವ, ಮೈದುನ, ಗೆಳತಿ, ಗುರು, ಸಂತ, ಗಂಡ ಜಾತ್ರೆ, ಆಚರಣೆ ಇನ್ನು ಮುಂತಾದವು ವಿಷಯಗಳನ್ನು ಕುರಿತು, ಸುಮಾರು ಅರವತ್ತು ಅಧ್ಯಾಯಗಳಾಗಿ ವಿಂಗಡಿಸಿ ಸ್ತ್ರೀ, ನೆಲೆಯಲ್ಲಿ ಚರ್ಚಿಸಲಾಗಿದೆ. ಅವಳ ಬದುಕನ್ನು ನಿಭಾಯಿಸಲು ಹಾಲು ಉತ್ಪಾದನೆ ಜನಪದರ ಆರ್ಥಿಕತೆ ಅಭಿವೃದ್ಧಿಯಲ್ಲಿ ತುಂಬಾ ಪ್ರಯೋಜನಕಾರಿಯಾಗಿದೆ. ಅಲ್ಲದೇ ಎಲ್ಲಾ ಜೀವಿಗಳಿಗೂ ಹಸಿವನ್ನು ನೀಗಿಸಬಲ್ಲ ಶಕ್ತಿ ಅದಕ್ಕೆ ಇದೆ. ಆದ್ದರಿಂದ ವೈವಿಧ್ಯಮಯ ತ್ರಿಪದಿಯ ಪದಗಳ ರಚನೆಯನ್ನು ಕಾಣುತ್ತೇವೆ.

ಜನಪದರ ಪ್ರತಿಭೆ ಮತ್ತು ಹೆಗ್ಗಳಿಕೆಯನ್ನು ಈ ಸಂಪಾದಿತ ಕೃತಿಯಲ್ಲಿ ಎತ್ತಿ ಹಿಡಿಯಲಾಗಿದೆ. ಹಳ್ಳಿಯ ಬದುಕಿನ ಆರ್ಥಿಕ ಸ್ಥಿತಿಗತಿಗಳನ್ನು ತಿಳಿದುಕೊಳ್ಳುವಲ್ಲಿ ಮುಖ್ಯ ಪಾತ್ರ ವಹಿಸುತ್ತವೆ. ಹಾಲು ಮಾರುವ, ಕೊಂಡುಕೊಳ್ಳುವ, ವ್ಯವಹಾರಜ್ಞಾನದ ಪರಿಕಲ್ಪನೆ ಜನಪದ ತ್ರಿಪದಿಕಾರರ ತಾತ್ವಿಕತೆಯನ್ನು ವಿವರಿಸುತ್ತದೆ.

ಗ್ರಾಮೀಣ ಪ್ರದೇಶದಲ್ಲಿ ಹಾಲನ್ನು ಅಮೃತವೆಂದು ತಿಳಿದು, ಪೂಜೆ ಪುನಸ್ಕಾರಗಳಲ್ಲಿ ಬಳಸುವ ಪದ್ಧತಿ ಇದೆ. ದೇವ ಮಾನವರಿಗೂ ಉಪಯುಕ್ತವಾದ ಅಮೃತವೇ ಆಗಿದೆ. ಆದುದರಿಂದ ಹಾಲಿನ ವೈಶಿಷ್ಟತೆ ವೈಧಾನಿಕತೆಯಿಂದ ಕೂಡಿದೆ.

## ೩.೩. ಗೊಂದಲಿಗರ ದೇವೇಂದ್ರಪ್ಪನ ಆಟಗಳು

ಜಾನಪದ ತಜ್ಞ ಮುದೇನೂರು ಸಂಗಣ್ಣನವರು ೧೯೯೩ರಲ್ಲಿ ಸಂಪಾದಿಸಿದ ಅಪರೂಪದ ಕೃತಿ. ಕನ್ನಡ ಜಾನಪದ ಸಾಹಿತ್ಯ ಕಲಾ ಕ್ಷೇತ್ರಕ್ಕೆ ಹೊಸ ಸೇರ್ಪಡೆ. ಜಾನಪದ ತಜ್ಞರಾದ ಮುದೇನೂರು ಸಂಗಣ್ಣ ಅವರ ಶ್ರದ್ಧೆ, ಶ್ರಮ ಮತ್ತು ಅನುಭವ ಈ ಕೃತಿಯಲ್ಲಿ ಹರಳುಗಟ್ಟಿದೆ. ಒಬ್ಬನೇ ಗೊಂದಲಿಗ ಕಲಾವಿದನ ಐದು ಆಟಗಳು ಮತ್ತು ಮೂರು ಅಡ್ಡ ಕತೆಗಳನ್ನು ಸಂಗ್ರಹಿಸಲಾಗಿದೆ.

ಸಂಪಾದಿತಗೊಂಡ ದೇವೇಂದ್ರಪ್ಪನವರ ಆಟಗಳಲ್ಲಿ ಜನಪದ ಪರಂಪರೆಯ ಸಂಸ್ಕೃತಿ, ಸಂಪ್ರದಾಯ, ಆಚಾರ, ವಿಚಾರಗಳನ್ನು ಅನಾವರಣ ಮಾಡಲಾಗಿದೆ ಕಲಾಭಿರುಚಿ ಮಾನವನ ಹುಟ್ಟುಗುಣ.

ಜಾನಪದ ಸಾಹಿತ್ಯ ಕಲೆಗಳಲ್ಲಿ ಜನಪದರ ಕಲ್ಪನೆ, ಅನುಭವ, ಸದಾಸೆ, ಅನಿಸಿಕೆ, ರೂಢನಂಬಿಕೆಗಳನ್ನು ಪ್ರಚೋಧಿಸುವ ಗುಣಗಳಿರುತ್ತವೆ. ಜನಪದ ಪರಂಪರೆಯ ಸತ್ವ ದೇವೇಂದ್ರಪ್ಪನ ಆಟಗಳಲ್ಲಿ ಹುದುಗಿ ಹೋಗಿವೆ, ಇಂತಹ ಕಲಾವಂತಿಕೆ ಗೊಂದಲಿಗರ ಆಟಗಳಲ್ಲಿ ಕಾಣುತ್ತೇವೆ. ಜನಪದ ಕಲಾ ಸಾಹಿತ್ಯವು ವಿವಿಧ ಆಯಾಮಗಳಲ್ಲಿ ಹರಡಿಕೊಂಡಿದೆ. ರಾಜಕೀಯ, ಶ್ರೀಮಂತ, ಬಡವ, ಬಲ್ಲಿದ, ಮೇಲು, ಕೀಳು ಎಂಬ ಭಾವನೆಗಳಿಗೆ ಮಾರು ಹೋದವರಲ್ಲ. ಅವು ಸಾಮಾಜಿಕ, ಧಾರ್ಮಿಕ, ನೈತಿಕತೆಯ ತತ್ವಗಳನ್ನೊಳಗೊಂಡು ಕಲಾ ವಿಧಾನವನ್ನು ಸೃಷ್ಟಿಸುವ ಸಾಂಸ್ಕೃತಿಕ ತಾಣಗಳು.

ಗೊಂದಲಿಗರ ಆಟದಲ್ಲಿ ಲೌಖಿಕ, ಕಾಲ್ಪನಿಕ, ಮರ್ತ್ಯ ಪಾತಾಳ ಹಾಗೂ ಕೈಲಾಸದ ದುರೀಣ ವ್ಯಕ್ತಿಗಳ ಕಥಾ ಸಾಹಿತ್ಯವನ್ನು ಹೆಣೆಯಲಾಗಿದೆ. ನೀತಿಯುಕ್ತ ಪೌರಾಣಿಕ ಕಥಾವಸ್ತುವನ್ನು ಬಳಸಿಕೊಳ್ಳಲಾಗಿದೆ. ಆಡುಭಾಷೆಯ ಪದಗಳನ್ನು ಬಳಸಿಕೊಂಡು ಆಟದಲ್ಲಿರುವ ಪಾತ್ರಗಳಿಗೆ ಜೀವ ತುಂಬಲಾಗಿದೆ. ಈ ಆಟವನ್ನು ಆಡುವುದಕ್ಕೆ ಕಾಲ, ಸ್ಥಳ, ಸಮಯಗಳ ನಿಬಂಧನೆ ಇಲ್ಲ. ಆದರೆ ಆಟದಲ್ಲಿ ಗದ್ಯ ಪದ್ಯ ಮಿಶ್ರಣಗೊಂಡು ಕಥಾ ನಿರೂಪಣೆ ಸಾಗುತ್ತದೆ. ಆಟದ ಮಧ್ಯೆ ನೋಡುಗರಿಗೆ ಬೇಸರವಾಗದಂತೆ, ಮನೋರಂಜನೆ ಕೊಡುವಂತೆ ಉಪಕಥೆಗಳನ್ನು ಬಳಸಿಕೊಳ್ಳಲಾಗಿದೆ.

ಪೌರಾಣಿಕ ಕಥೆಗಳಲ್ಲಿ ಆದರ್ಶವ್ಯಕ್ತಿಗಳ ಬಲಿದಾನವಾದರೂ, ಸುಖಾಂತಕ್ಕೆ ಶೋಭೆ ತರುತ್ತವೆ. ಆದರೆ ಗೊಂದಲಿಗರ ಕಾಲ್ಪನಿಕ ಕಥೆಗಳಲ್ಲಿ ಸತ್ಯವಂತರು ಸತ್ತರು ಮತ್ತೆ ಬದುಕಿ ಸುಖ ಸಂತೋಷಗಳಲ್ಲಿ ಭಾಜನರಾಗುತ್ತಾರೆ. ಈ ಆಟಗಳಲ್ಲಿ ಧಾರ್ಮಿಕ ಮೂಢ ನಂಬಿಕೆಗಳು ಹೆಚ್ಚು ಕಾಣುತ್ತವೆ. ಸಮಾಜದಲ್ಲಿರುವ ಅಂಧಕಾರವನ್ನು ಅನಾವರಣಗೊಳಿಸಲಾಗಿದೆ. "ಮಾಟ, ಮಂತ್ರ, ಪವಾಡಗಳ ಜೊತೆಗೆ ಹಿಡಂಬಿ ರಾಕ್ಷಸ" ಪಾತ್ರಗಳು ಸಂಭವನೀಯವಾದ ಭ್ರಮೆಯನ್ನು ಮೂಡಿಸುವಂತೆ ವರ್ತಿಸುತ್ತವೆ.

ಈ ಆಟದಲ್ಲಿ ಬರುವ ಕಥಾನಾಯಕ–ನಾಯಕಿಯರು ಏಕಾಂಗಿಗಳಾಗಿ ಶೌರ್ಯ ಸಾಹಸಗಳಿಂದ ಪ್ರದರ್ಶಿಸುತ್ತಾರೆ. ಇಂತಹ ಸಾಹಸಮಯ ಪ್ರದರ್ಶನ ಕಲೆಗಳನ್ನು, ಯುದ್ಧ ಕಲೆಗಳನ್ನು ಜನಪದರು ವರ್ಣಿಸುತ್ತಾರೆ.

ಪುರಾಣ ಕಥೆಗಳಿಗೂ ಮತ್ತು ಗೊಂದಲಿಗರ ಕಾಲ್ಪನಿಕ ಆಟಗಳಿಗೂ ಯಾವುದೇ ರೀತಿಯ ವ್ಯತ್ಯಾಸ ಕಾಣುವುದಿಲ್ಲ. ಎರಡು ಒಂದೇ ವಸ್ತುವೆಂಬಂತೆ ಭಾಸವಾಗುತ್ತವೆ. ಆದರೆ ಅದರಲ್ಲಿ ಬರುವ ಪಾತ್ರಧಾರಿಗಳ ಹೆಸರುಗಳು ಮಾತ್ರ ಬದಲಾಗುತ್ತವೆ. ಉದಾಹರಣೆಗೆ ಪುರಾಣ ಕಥೆಗಳಲ್ಲಿ ರಾಮ ಲಕ್ಷ್ಮಣರು ವನವಾಸ ಕಾಲದಲ್ಲಿ ಸೀತೆಯನ್ನು ಹುಡುಕುವಂತೆ, "ಶೀಲಾವತಿ" ಆಟದಲ್ಲಿ ಉದಯವಾನ, ಶುಭವಾನ ಇಬ್ಬರು ಸಹೋದರರು. ಶೀಲಾವತಿಯನ್ನು ಹುಡುಕುವ ದೃಶ್ಯವನ್ನು ಕಾಣುತ್ತೇವೆ. ಶ್ರೀರಾಮಚಂದ್ರನ ಬಗ್ಗೆ ಭರತ ಪ್ರೀತಿಯನ್ನು ತೋರಿಸುವಂತೆ, ಗೊಂದಲಿಗ ಆಟದಲ್ಲಿ ಶುಭವಾನನು ತನ್ನ ಅಣ್ಣನ ಪ್ರೀತಿಗೆ ಪಾತ್ರನಾಗುತ್ತಾನೆ.

ಗೊಂದಲಿಗರು ಭಕ್ತಿ ಪ್ರಧಾನ ಕಥೆಗಳನ್ನು ಆಯ್ದುಕೊಳ್ಳುವುದೇ ಹೆಚ್ಚಾದರೂ, ನೀತಿ ಪರ ಕಥೆಗಳನ್ನು ಗೊಂದಲಿಗ ಆಟದಲ್ಲಿ ಬಳಸಿಕೊಂಡಿದ್ದಾರೆ. "ಬನ್ನಿ ಮಹಾಂಕಾಳಿ, ರೇಣುಕಾ ಮಹಾತ್ಮೆ" ಇವು ಭಕ್ತಿ ಪ್ರಧಾನ ಕಥೆಗಳಾದರೆ. "ಮಹಾಸತಿ ಶಿವಲೋಚನಾ, ಬಾಳಭಿಕ್ಷುಕ, ಸತ್ಯ ಶೀಲಾವತಿ, ರಾಜಾವೀರ ಪರಾಕ್ರಮ, ವಿಘ್ನಾವತಿ"ಯಂತಹ "ನೀತಿಪರ ಕಥೆಗಳು" ಮಾನವೀಯ ಮೌಲ್ಯಗಳನ್ನು ಕಟ್ಟಿಕೊಡುತ್ತವೆ. ಗೊಂದಲ ಆಟಗಳಲ್ಲಿ ದೇವಸ್ತುತಿ ಮತ್ತು ಕುಣಿತಗಳಿಗೆ ಹೆಚ್ಚು ಪ್ರಾಧಾನ್ಯತೆ ಇದೆ.

ಈ ಆಟದ ಮತ್ತೊಂದು ಲಕ್ಷಣವೆಂದರೆ "ಗೊಂದಲಿಗರು ಕಥೆ ಹೇಳುವುದಿಲ್ಲ. ತಾನಲ್ಲದ ಮತ್ತೊಬ್ಬ ವ್ಯಕ್ತಿಯಾಗಿ, ಪಾತ್ರಧಾರಿಯಾಗಿ ವರ್ತಿಸುವ, ಅನುಕರಣೆಯ ಮೂಲಕ ನಟನೆ ಮಾಡುವ ವ್ಯಕ್ತಿಗಳಾಗಿ ಕಾಣಿಸಿಕೊಳ್ಳುತ್ತಾರೆ." ಚಲನವಲನ ಕ್ರಿಯೆಗಳಿಂದ ಪಾತ್ರಧಾರಿಗಳಾಗಿ ಕಾಣಿಸುವ ಸೂಕ್ಷ್ಮತೆಯನ್ನು ನೋಡಬಹುದು. ಈ ಆಟದ ಸಂಭಾಷಣೆ ಅರ್ಥ ಪೂರ್ಣ ಸಾಹಿತ್ಯದಿಂದ ಕೂಡಿದೆ. ವಾಸ್ತವಿಕ ಘಟನೆಗಳು ಮತ್ತು ಕಾಲ್ಪನಿಕ ಕಥೆಗಳು ಸಹೃದಯರನ್ನು ಭಾವುಕತನದಲ್ಲಿ ಅಂಗೀಕರಿಸುತ್ತವೆ.

ರಂಗನಾಟಕಗಳಂತೆ ಈ ಆಟವು ನಾಂದಿಯಿಂದ ಪ್ರಾರಂಭವಾಗುತ್ತವೆ. ಗೊಂದಲಿಗ ಆಟ ಮುಕ್ತಾಯವಾದಾಗ ಮಂಗಳಾರತಿ ಹಾಡುವ ಪದ್ಧತಿ ಇದೆ. ನಾಟಕವು ಅಲ್ಲದ ಕಥೆಯೂ ಅಲ್ಲದ ಇದೊಂದು ಬಗೆಯ ಕಲಾಪ್ರಕಾರವಾಗಿದೆ. ಆದ್ದರಿಂದ ಈ ಆಟಕ್ಕೆ 'ಗೊಂದ್ಲೇರ ಆಟ ಆಡಿಸುವುದು. ಈ ಆಟವೇ ಗೊಂದಲಿಗರ ವೃತ್ತಿ ಪರಂಪರೆಯಾಗಿದೆ. ಇದರಿಂದಲೆ ಇವರ ಜೀವನ ನಡೆಯ ಬೇಕಿತ್ತು.

ಗೊಂದಲಿಗರು ಆಟವಾಡುವುದಕ್ಕೆ ನಿರ್ಧಿಷ್ಟವಾದ ಸ್ಥಳ ಇರುವುದಿಲ್ಲ ಮನೆ ಮುಂದೆ, ದೇವಸ್ಥಾನಗಳ ಮುಂದೆ, ಓಣಿಗಳಲ್ಲಿ ಆಟವಾಡುತ್ತಿದ್ದರು. ಆದರೆ ಕಾಲ್ಪನಿಕ ಐಸಾರಾಮಿ ಸ್ಥಳಗಳನ್ನು ಆಟದಲ್ಲಿ ಹೆಸರಿಸುತ್ತಾರೆ.

ಒಂದೊಂದು ಸ್ಥಳವು ಆಯಾ ಸನ್ನಿವೇಶಕ್ಕೆ ತಕ್ಕಂತೆ ಪಾತ್ರಧಾರಿಗಳ ವ್ಯಕ್ತಿತ್ವವನ್ನು ವರ್ಣಿಸುತ್ತವೆ. ಆಟದ ಮುಖ್ಯಸ್ಥಳಗಳೆಂದರೆ "ಏಳಂತಸ್ತಿನ ಅರಮನೆ, ಬಣ್ಣದ ರಾಜ ಕಛೇರಿ, ಚಾವಡಿ ಪಗಡೋಸಾಲ ಬಜಾರ, ಚಂದ್ರಬೀದಿ, ಅಗಸಿಬಾಗಲು, ವನಾಂತರ, ಘೋರಾರಣ್ಯ, ಝೋಪಡಿ, ಗವಿ, ಗುಡ್ಡ, ಸರೋವರ, ಬಾವಿ, ಕೆರೆ" ಮುಂತಾದ ಕಾಲ್ಪನಿಕ ಸ್ಥಳಗಳನ್ನು ನಿರೂಪಣೆ ಮಾಡುವ, ಸಂಭಾಷಣೆ ನೀಡುವ ಕಲಾತ್ಮಕ ಪ್ರತಿಭೆಯನ್ನು ಗುರುತಿಸಲಾಗಿದೆ.

ಗೊಂದಲಿಗರ ಆಟದ ಕಥಾ ಉದ್ದೇಶ ಮಾನವತೆಯ ಘನತೆಯನ್ನು ಎತ್ತಿ ತೋರಿಸುತ್ತವೆ. ಮಾನವೀಯ ಗುಣಗಳನ್ನು ಗೌರವಿಸುತ್ತವೆ. ಭೌತಿಕ ನೆಲೆಯ ಲೋಕ ವಿರೋಧಿಗಳಿಗೆ ಉಳಿಗಾಲವಿಲ್ಲವೆಂಬುದನ್ನು ಮನವರಿಕೆ ಮಾಡಿಕೊಡುತ್ತವೆ. ಈ ಆಟದಲ್ಲಿ ಬರುವ ಸಮಾಜ ಘಾತುಕ ಕಪ್ಪಟತನ, ಮೋಸ, ವಂಚನೆ ಮಾಡುವ ವ್ಯಕ್ತಿಗಳಿಗೆ ಘೋರ ಕಠಿಣ ಶಿಕ್ಷೆ ನೀಡುವ ತತ್ವವನ್ನೊಳಗೊಂಡಿದೆ. ಸಭ್ಯರನ್ನು ಸಾಧ್ವಿ ಸ್ತ್ರೀಯರನ್ನು, ಮುಗ್ಧರನ್ನು, ನಿರಂಕುಶ ಪ್ರಭುತ್ವವುಳ್ಳ ಅರಮನೆಯ ರಾಕ್ಷಸೀ ಮಹತ್ವಾಕಾಂಕ್ಷೆ ಕಾಡುತ್ತದೆ

ಸಮಾಜದಲ್ಲಿ ಪುರೋಹಿತಶಾಯಿಗಳು, ಮೇಲ್ವರ್ಗದವರು ಅಸ್ಪರ್ಶರನ್ನು, ಧಾರ್ಮಿಕ ವಿಧಿ ವಿಧಾನಗಳಲ್ಲಿ ಶೋಷಿಸುತ್ತಲೇ ಬಂದಿದ್ದಾರೆ. ಕಥೆ, ಕಾದಂಬರಿ, ನಾಟಕಗಳಲ್ಲಿ ಶೋಷಣೆಯನ್ನು ಕಾಣುತ್ತೇವೆ. ಆದರೆ ಗೊಂದಲಿಗರ ಆಟದಲ್ಲಿ ವ್ಯಕ್ತಿಶೋಷಣೆ, ರಾಗದ್ವೇಷ, ಕುಲ, ವರ್ಗಗಳ ನಡುವೆ ಭೇಧವಿಲ್ಲವೆಂಬುದನ್ನು ಬಿಂಬಿಸುತ್ತವೆ.

ಗೊಂದಲಿಗರು ಐತಿಹ್ಯಗಳಿಗೆ ಪೌರಾಣಿಕ ಸ್ಪರ್ಶ ಕೊಡುತ್ತಾರೆ. ವೀರ ಪರಾಕ್ರಮ ಆಟದಲ್ಲಿ ದೇವಲೋಕದ ವಿಧಿಮಾಯೆ ತನ್ನ ಬಂಜೆತನ ನೀಗಿಸಿಕೊಳ್ಳಲಿಕ್ಕಾಗಿ, ಈ ಭೂ ಲೋಕದ ರಾಜನ ಕೈ ಹಿಡಿಯುತ್ತಾಳೆ. ರಾಣಿಯಾಗಿ ಸುಖದ ಸಂಪತ್ತಿನಲ್ಲಿ ತೇಲಾಡುತ್ತಾ ತಾಯಿತನವನ್ನು ಅನುಭವಿಸುತ್ತಾಳೆ. ಅದೇ ರೀತಿಯಾಗಿ "ಸತಿ ಶಿವಲೋಚನ" ಆಟದಲ್ಲಿ ನಾರದನ ಚಿತಾಭಸ್ಮದಿಂದ, ದೇವಲೋಕದ ಅಪ್ಸರೆ ರಂಭೆಯು ಶಾಪಗ್ರಸ್ತಳಾಗಿ ಮರ್ತ್ಯಲೋಕದಲ್ಲಿ ಶಿವಲೋಚನೆಯಾಗಿ ಜನ್ಮ ಪಡೆಯುತ್ತಾಳೆ. ಮರ್ತ್ಯ ಮತ್ತು ದೇವಲೋಕದ ಸಂಬಂಧವನ್ನು ಜಾನಪದರು ಅರಿತ್ತಿದ್ದರು. ಪ್ರತಿಯೊಂದು ಜೀವರಾಶಿಯು ಈ ಭೂಮಿಯ ಮೇಲೆ ಬದುಕ ಬೇಕು. ಭೂಮಿಯನ್ನು ಬಿಟ್ಟರೆ ಬೇರೆ ಗತಿ ಇಲ್ಲ. ಸ್ವರ್ಗ, ನರಕ, ಎಲ್ಲವುಗಳನ್ನು ಈ ಭೂಮಿಯ ಮೇಲೆ ಅನುಭವಿಸಬೇಕು ಎಂಬ ಸಂದೇಶ ಇಲ್ಲಿದೆ.

ಗೊಂದಲಿಗರು ಮಾತನಾಡುವ ಆಡು ಭಾಷೆಯನ್ನೆ ಈ ಗ್ರಂಥದಲ್ಲಿ ಬಳಸಿಕೊಳ್ಳಲಾಗಿದೆ. ಗೊಂದಲಿಗರು ಗೊಂದಲ ಆಟದಲ್ಲಿ ಕನ್ನಡ, ಉರ್ದು, ಹಿಂದಿ ಭಾಷೆಯ ಪದಗಳನ್ನು ಬಳಸಿಕೊಂಡಿರುವುದು ಆಟದ ವೈಶಿಷ್ಟ್ಯತೆಯಾಗಿದೆ. ಉದಾಹರಣೆ–

"ಬಾಲೀಶಾಖಾಚಲೀಗಯಿ

ದಿಲ್ ಕೀ ಕಲಿಯೂ

ಕ್ಯಾಕರೂಂ ಮೈಕರೂಂ ತಾರೀಫ್ ತೇರೀ

ಮುಖ ಪ್ಯಾರೀ ಸರ್ಕಾರೀ ದರ್ಬಾರೀ ಗುಲ್‌ಪ್ಯಾರೀ"[೯]

ಈ ಮೇಲಿನ ಪದಗಳನ್ನು ಶಿವಲೋಚನಾ ಆಟದಲ್ಲಿ ರಂಭಾವತಿಯು ರಾಜಕುಮಾರನನ್ನು ಒಲಿಸಿಕೊಳ್ಳುವುದಕ್ಕಾಗಿ ಹಾಡುತ್ತಾಳೆ. ಶೀಲಾವತಿ ಆಟದಲ್ಲಿಯು ಉರ್ದು ಮಾತುಗಳ ಬಳಕೆಯನ್ನು ಕಾಣುತ್ತೇವೆ.

ಗೊಂದಲಿಗರ ಆಟದಲ್ಲಿ ಪದಗಳ ದಾಟಿ, ತಾಳ, ಲಯದಿಂದ ಕೂಡಿವೆ. ಸಂದರ್ಭ ಸನ್ನಿವೇಶಗಳಿಗೆ ತಕ್ಕಂತೆ ಪದಗಳು ಪುನರಾವರ್ತನೆಗೊಳ್ಳುತ್ತವೆ. ಬಾಣಂತಿಯ ಹೆರಿಗೆ ಸನ್ನಿವೇಶ ಕಥಾ ಪ್ರಸಂಗದಲ್ಲಿ ಮಹಿಳೆಯರ ನೋವಿನ ಅನುಭವಗಳನ್ನು ಈ ಆಟದಲ್ಲಿ ವ್ಯಕ್ತಪಡಿಸಲಾಗಿದೆ.

"ತಡಿಯಲಾರೆ ಬ್ಯಾನಿಗಳನೂ

ತಾಸು ತಾಸೀನ ಬ್ಯಾನಿ ತಾಳಿಲೆ ಕಟುದ್ದಂಗ"[೧೦]

ಇಂತಹ ನೋವಿನ ಸಂಗತಿಗಳನ್ನು ಜಾನಪದ ಆಟಗಾರರು, ತೋರ್ಪಡಿಸುತ್ತಾರೆ.

ಗೊಂದಲಿಗರ ಆಟದಲ್ಲಿ ಕಥೆಗಾರ ಮತ್ತು ಹಿಮ್ಮೇಳಿಗರೇ ಪ್ರಮುಖ ಪಾತ್ರಧಾರಿಗಳು. ಈ ಆಟದಲ್ಲಿ ಪ್ರತ್ಯೇಕವಾಗಿ ಅಭಿನಯಿಸುವ ನಟರಿಲ್ಲ. ಆ ಕಾರಣದಿಂದ ಆಟದಲ್ಲಿ ಬರುವ ಎಲ್ಲಾ ಪಾತ್ರಗಳನ್ನು ಇವರಿಬ್ಬರೆ ನಿಭಾಯಿಸಿಕೊಂಡು ಹೋಗುತ್ತಾರೆ. ಆಟದಲ್ಲಿ ಬರುವ ಪಾತ್ರಗಳ ವೇಷಭೂಷಣಗಳನ್ನು ಕಥಾ ನಿರೂಪಣೆಯಲ್ಲಿ ವರ್ಣಿಸುತ್ತಾರೆ. ಪಾತ್ರಧಾರಿಗಳ ವ್ಯಕ್ತಿತ್ವ ಮತ್ತು ಆಕೃತಿಯನ್ನು ಕಟ್ಟಿ ಕೊಡುತ್ತಾರೆ. ಈ ಆಟದಲ್ಲಿ "ಯುದ್ಧ ಸಾವು, ಪಟ್ಟಾಭಿಷೇಕ" ಇವುಗಳನ್ನು ಅಭಿನಯಿಸಲು ಸಾಧ್ಯವಿಲ್ಲ. ಆಗ "ಯುದ್ಧ ಮಾಡಿದರು", "ಸತ್ತರು", "ಪಟ್ಟ ಕೊಟ್ಟರು" ಎಂದು ನಿರೂಪಣೆಯ ರೂಪದಲ್ಲಿ ಕಥಿಸುತ್ತಾರೆ.

ಗೊಂದಲಿಗರ ಆಟದಲ್ಲಿ ರಾಜ ಮತ್ತು ರಾಣಿಯರ ಕರ್ತವ್ಯ ಪ್ರಜ್ಞೆ ಹಾಗೂ ಸಾಮಾಜಿಕ ನಿವಾರಣೋಪಾಯದ ಅರಿವನ್ನು ಮೂಡಿಸುತ್ತದೆ. ಈ ಆಟದಲ್ಲಿ ಬರುವ ಮುಖ್ಯ ಉದ್ದೇಶ ರಾಜನಾದವನು ಜನ ಸೇವಕನಾಗಿರಬೇಕು. ನ್ಯಾಯ ನಿಷ್ಠೂರ ವ್ಯಕ್ತಿತ್ವವುಳ್ಳವನಾಗಿರಬೇಕು. ಸತ್ಯ ಸತ್ಯತೆಯನ್ನು ಅರಿತು ನ್ಯಾಯ ಒದಗಿಸಬೇಕು. ಸಾತ್ವಿಕತೆ ಗುಣ ಹೊಂದಿರಬೇಕು ಪರೋಪಕಾರ ಮನೋಭಾವನೆ ಇರಬೇಕು. ಹೀಗೆ ರಾಜನ ಧೈರ್ಯ ಸಾಹಸಗಳನ್ನು ಈ ಆಟದಲ್ಲಿ ವರ್ಣಿಸಲಾಗಿದೆ. ರಾಜನಾದವನು ರಾಜ್ಯವನ್ನು ಆಳುವವನು ವೀರ ಪರಾಕ್ರಮ ಶಾಲಿಯಾಗಿರಬೇಕು. ಸಾವಿಗಂಜಿ ಹಿಂಜರಿಯುವ ಧರ್ಮ ರಾಜನದಲ್ಲ ಎಂಬ ತತ್ವವನ್ನು ಈ ಆಟವು ಸಾರುತ್ತದೆ.

ಈ ಆಟಗಳಲ್ಲಿ ಬರುವ ಕಥಾನಾಯಕ ನಾಯಕೀಯರ ಜೀವನ ಮೌಲ್ಯಗಳ ತಾತ್ವಿಕತೆಯನ್ನು ವಿವರಿಸುತ್ತದೆ. ನಾಯಕ ಮತ್ತು ನಾಯಕಿಯರು ಸತ್ತು ಮತ್ತೆ ಬದುಕಿ, ಸಂಗಾತಿಯರೊಂದಿಗೆ ಒಂದುಗೂಡಿ ಬಾಳುವ ಸುಖಾಂತದ ಕಥನವನ್ನು ತಿಳಿಸುತ್ತದೆ. ಇವರು ಎಂದಿಗೂ ಸೋಲರಿಯದ ಸಹಾಸಿಗಳು.

ಇಂತಹ ಪಾತ್ರಗಳು ಜೀವಂತಿಕೆತನವನ್ನು ಕಟ್ಟಿ ಕೊಡುತ್ತವೆ. ಕಥಾನಾಯಕ ನಾಯಕಿಯರನ್ನು ವಿಜೃಂಭಿಸಲು ಪೋಷಕ ಮತ್ತು ಸಾಮಾನ್ಯ ಪಾತ್ರಗಳು ಪ್ರಮಾಣಿಕವಾಗಿ ಶ್ರಮಿಸುತ್ತವೆ

ಈ ಆಟದಲ್ಲಿ ಮನುಷ್ಯನಿಗೆ ಪಶು ಪಕ್ಷಿಗಳು ಸಹಾಯ ಮಾಡುತ್ತವೆ. ಮಾನವ ಕ್ರಿಯೆಗಳಿಗೆ ಚಲನಾವಲನವನ್ನು ನೀಡುವಲ್ಲಿ, ಪ್ರೀತಿ ವಿಶ್ವಾಸವನ್ನು ತೋರುವಲ್ಲಿ, ಅನ್ಯ ಜೀವರಾಶಿಗಳು ಶ್ರಮಿಸುವಲ್ಲಿ ಸಹಾಯಕಾರಿಯಾಗಿವೆ. ಜಾನಪದ ಮತ್ತು ಪೌರಾಣಿಕ ಕತೆಗಳಲ್ಲಿ ಕುದುರೆ ಮತ್ತು ಸವಾರನ ಪಾತ್ರಗಳು ಬರುತ್ತವೆ. ಗೊಂದಲಿಗರ ಆಟಗಳಲ್ಲಿ ಇವುಗಳ ಪಾತ್ರ ಪ್ರಮುಖವಾಗಿವೆ. ಆದರೆ ಸತ್ವವಿಲ್ಲದ "ಕೀಲು ಕುದುರೆ"ಯನ್ನು ಬಳಸಿಕೊಳ್ಳಲಾಗಿದೆ. ಇದು ಹಕ್ಕಿಯಂತೆ ಅಂತರ್ ಮಾರ್ಗವಾಗಿ ಹಾರುವ ಆಜ್ಞಾಧಾರಕ ವಾಹನವಾಗಿ ವರ್ತಿಸುತ್ತದೆ. ಸತ್ವವಿಲ್ಲದ ಕೀಲು ಕುದುರೆಗೆ ಜೀವ ತುಂಬುವ ಗೊಂದಲಿಗರ ಪ್ರತಿಭಾನ್ವಿತ ಮನೋ ಪ್ರೌವೃತ್ತಿಯನ್ನು ಇಲ್ಲಿ ಕಾಣುತ್ತೇವೆ.

ಸ್ತ್ರೀಯು ರಾಜನ ಅರಮನೆಯ ಸುಪ್ಪತ್ತಿಗೆಯಲ್ಲಿ ತೇಲಾಡುತ್ತಿದ್ದರು ಸಹ ಹಿಂಸೆ, ಶೋಷಣೆ, ಕ್ರೌರ್ಯ ಇವುಗಳ ಬಲೆಯಲ್ಲಿ ಸಿಲುಕಿಕೊಳ್ಳುತ್ತಾಳೆ ಎಷ್ಟೇ ಸಾಹಸ ಮಾಡಿದರು ಇದರಿಂದ ಹೊರ ಬರಲು ಸಾಧ್ಯವಿಲ್ಲ. ಗೊಂದಲಿಗರ ಆಟದಲ್ಲಿ ಸ್ತ್ರೀಯರ ಜೀವನ ಚಿಂತಜನಕವಾಗಿದೆ. ಪುರುಷ ಪ್ರಧಾನ ಸಮಾಜದಲ್ಲಿ ಸ್ತ್ರೀಯರು ಹೇಗೆ ಶೋಷಣೆಗೆ ಒಳಗಾಗುತ್ತಾರೆ. ದುಃಖ, ವೇದನೆಗಳಂತಹ ಜಿಜ್ಞಾಸೆಗಳನ್ನು ಅನುಭವಿಸುತ್ತಾರೆ. ತಮ್ಮ ಮನಸ್ಸಿನಲ್ಲಿರುವ ಅಳಲನ್ನು ತೋಡಿಕೊಳ್ಳಲಾಗದ ಸ್ಥಿತಿಯನ್ನು ಈ ಆಟಗಳು ಕಟ್ಟಿ ಕೊಡುತ್ತವೆ. "ಶೀಲಾವತಿ" ಮತ್ತು ಬಾಳಭಿಕ್ಷುಕನ ಮಡದಿ "ಪದ್ಮಾವತಿಯು ಪುರುಷರ ಕೈಗೊಂಬೆಗಳಾಗಿ, ಅವರಿಂದ ತಮ್ಮ ಶೀಲವನ್ನು ಕಾಪಾಡಿಕೊಳ್ಳಲು ಅರಣ್ಯಯಾತನೆ ಮತ್ತು ಪುರುಷರ ದಬ್ಬಾಳಿಕೆಯ ತುಳಿತಕ್ಕೊಳಗಾಗುತ್ತಾರೆ. ಅಲ್ಲದೆ ಹಿಂಸೆ, ತೊಂದರೆಗಳನ್ನು ಅನುಭವಿಸುತ್ತಾರೆ. ಅರಸರು ತಮ್ಮ ರಾಣಿಯರನ್ನು ತಿರಸ್ಕರಿಸಿದರೆ ಇಡೀ ರಾಜ್ಯವೇ ತಿರಸ್ಕರಿಸುತ್ತದೆ. ಇಲ್ಲಿ ಪ್ರಭುತ್ವದ ದಬ್ಬಾಳಿಕೆಯನ್ನು ಎತ್ತಿ ತೋರಿಸುತ್ತದೆ.

ಭಾರತೀಯ ನಾರಿ ಧರ್ಮದ ಸಂಕೇತ ಪಾತಿವ್ರತ್ಯವನ್ನು ಕಾಪಾಡಿಕೊಳ್ಳಬೇಕು. ಅವಳು ಮದುವೆಯಾಗುವವರೆಗೂ ಸ್ತ್ರೀಯರ ಲೈಂಗಿಕ ಪರಿಶುದ್ಧತೆಯ ಕಾಳಜಿಯನ್ನು ಪುರುಷ ಸಮಾಜವೇ ವಹಿಸುತ್ತದೆ. ಈ ಆಟಗಳಲ್ಲಿ ಸ್ತ್ರೀಯರಿಗೆ ಯಾವುದೇ ತೀರ್ಮಾನ ತೆಗೆದುಕೊಳ್ಳುವ ಸ್ವಾತಂತ್ರವಿಲ್ಲವೆಂಬುದನ್ನು ಮನವರಿಕೆ ಮಾಡಿಸುತ್ತದೆ. ಈ ಗೊಂದಲಿಗರ ಆಟಗಳಲ್ಲಿ ಬ್ರಾಹ್ಮಣರ ತತ್ವ ಪರಿಪಾಲನೆ ಕಠೋರಯುಕ್ತವಾಗಿದೆ. "ಬ್ರಾಹ್ಮಣ ಕನ್ನೆಯಾದರೆ ಋತುಮತಿಯಾಗುವ ಮುನ್ನವೆ ಮದುವೆ ಮುಗಿಸತಕ್ಕದ್ದು. ಇಲ್ಲದಿದ್ದರೆ ತಂದೆ–ತಾಯಿಯನ್ನು ತೊರೆದು ಅರಣ್ಯವಾಸವನ್ನು ಅನುಭವಿಸಬೇಕು." ಸ್ವಯಂ ನಾರಿಯೇ ತನ್ನ ಶೀಲವನ್ನು ಕಾಪಾಡಿಕೊಳ್ಳಬೇಕು. ಇಂತಹ ತಾತ್ವಿಕ ವಿಚಾರಗಳನ್ನು, ಸ್ತ್ರೀ ಲೋಲುಪತಿಯನ್ನು ಶೀಲಾವತಿ ಮತ್ತು ಬಾಳಭಿಕ್ಷುಕ ಆಟದ ಕಥಾ ವಸ್ತುಗಳು ಪರಿಚಯಿಸುತ್ತವೆ.

ಗೊಂದಲಿಗರ ಆಟಗಳಲ್ಲಿ ರಾಕ್ಷಸರ ಸರ್ವಾಧಿಕಾರಿತನದ ಪ್ರಭುತ್ವವನ್ನು ವಿವರಿಸುತ್ತವೆ. "ರಾಕ್ಷಸರು ಕ್ರೂರ ಸರ್ವಪ್ರಾಣಿಭಕ್ಷಕರು ನೇರ ಹೋರಾಟಗಳಲ್ಲಿ ರಾಕ್ಷಸರನ್ನು ಕೊಲ್ಲಲು ಸಾಧ್ಯವಿಲ್ಲ ಇವರ ಪ್ರಾಣಗಳು ಗಡಿಗೆ, ಗೊಂಬೆ, ಮರಸೋಟಗಳಂಥ ಅನ್ಯ ವಸ್ತುಗಳು ಹಾಗೂ ಗಿಡಗಳಂಥ ಪಕ್ಷಿಗಳಲ್ಲಿರುವುದೇ

ಹೆಚ್ಚು" ಇವುಗಳನ್ನು ನಾಶ ಮಾಡಿದಾಗ ಮಾತ್ರ ರಾಕ್ಷಸರಂತಹ ಪೀಡಿಕರಿಗೆ ಸಾವು ಸಂಭವಿಸುತ್ತವೆ. ಈ ಪ್ರಭುತ್ವದ ಅಂಧಕಾರತನದ ಮೌಢ್ಯವನ್ನು ಬಿತ್ತರಿಸಲಾಗಿದೆ. ಇವುಗಳನ್ನು ತೊಲಗಿಸುವಲ್ಲಿ "ತೋರಂಗಿ ಬಾವಾ" ಎಂಬ ವ್ಯಕ್ತಿಯ ಪಾತ್ರವು ಆಟಗಳಲ್ಲಿ ಪ್ರಾಧಾನ್ಯತೆ ವಹಿಸುತ್ತದೆ.

ತೋರಂಗಿ ಬಾವಾ ಒಬ್ಬ ಅಸಾಮಾನ್ಯ ಮಾನವ ವ್ಯಕ್ತಿ. ಜನ ಸಂಪರ್ಕವಿಲ್ಲದ ಏಕಾಂತ ಸ್ಥಳದಲ್ಲಿ ಈತನ ವಾಸ, ಆಪತ್ತಿನಲ್ಲಿರುವ ಕಥಾನಾಯಕ, ನಾಯಕಿಯರಿಗೆ ಈತ ಮಂತ್ರಿಸಿದ ಹರಳುಗಳನ್ನು ಕೊಡುತ್ತಾನೆ. ತನ್ನ 'ನೀಲಾ ಹೊತ್ತಿಗೆ'ಯ ನೆರವಿನಿಂದ ಅಂಥವರಿಗೆ ಮಾರ್ಗದರ್ಶನ ನೀಡುತ್ತಾನೆ. ಹಿಡಿಂಬಗಳಂಥ ಬ್ರಹ್ಮ ರಾಕ್ಷಸರ ಅಮಾನುಷರ, ಎಲ್ಲ ವಿಧಧ ಮಂತ್ರ, ಮಾಟ, ಮೋಸಗಳನ್ನು ನಿವಾರಿಸುತ್ತಾನೆ. ಸಜ್ಜನರಿಗೆ ನೆರವಾಗುತ್ತಾನೆ. ಈ ಆಟಗಳ ಮುಖ್ಯ ಸಂದೇಶವೇನೆಂದರೆ, ಜ್ಞಾನ, ಅರಿವು, ವೈಚಾರಿಕತೆ ಪ್ರಜ್ಞೆ, ಸಾಮಾಜಿಕ ನಿವಾರಣೆಯಂತಹ ವಿಚಾರಗಳನ್ನು ಎತ್ತಿ ತೋರಿಸುತ್ತವೆ.

### ೩.೪. ಗೊಂಬೀಗೌಡರ ಸೂತ್ರದ ಗೊಂಬೆ ಆಟಗಳು

ಪ್ರಾಚೀನ ಕಾಲದಿಂದಲೂ ಈ ಆಟವು ಚಿರ ಪರಿಚಿತವಾದುದು. ಇದೊಂದು ಜನಪದ ರೂಪವಾಗಿತ್ತು. ಮುಂದೆ ಗೊಂಬೀಗೌಡರ ರಂಗಕಲೆಯು ಜನಪ್ರಿಯ ಕಲಾ ಮಾಧ್ಯಮವಾಯಿತು. ನಂತರ ಈ ಕಲೆ ಸೂತ್ರದ ಗೊಂಬೆ ಆಟ ಎಂದು ಪ್ರಸಿದ್ಧವಾಯಿತು. ಈ ಜನಪ್ರಿಯ ಕಲಾ ಪ್ರಕಾರವನ್ನು ಮುದೇನೂರು ಸಂಗಣ್ಣನವರು "ಗ್ರಾಮೀಣ ಪ್ರದೇಶದ ರಾತ್ರಿ ಸಾಲಿ" ಎಂದು ಹೆಸರಿಸುವ ಮೂಲಕ ಅದರ ಮಹತ್ವವನ್ನು ಹೆಚ್ಚಿಸಿದರು.

ಸೂತ್ರದ ಗೊಂಬೆ ಆಟವನ್ನು ಮುದೇನೂರು ಸಂಗಣ್ಣನವರು ೧೯೯೫ರಲ್ಲಿ ಸಂಗ್ರಹಿಸಿ ಸಂಪಾದಿಸಿದರು. ಈ ಕೃತಿ ಮುಖ್ಯವಾಗಿ ಎರಡು ಆಟಗಳನ್ನು ಒಳಗೊಂಡಿವೆ. ಒಂದು 'ರಾವಣ ವಧಾ' ಎರಡನೇಯದು 'ಅಭಿಮನ್ಯು ವಧಾ' ಈ ಎರಡು ಆಟಗಳು ಆಡು ಭಾಷೆಯ ದಾಟಿಯಲ್ಲಿ ರಚನೆಗೊಂಡಿವೆ. ಅಲ್ಲದೆ ರಂಗ ಸಂಭಾಷಣೆಯ ಕಲಾತ್ಮಕತೆಯನ್ನೊಳಗೊಂಡಿವೆ.

ಸೂತ್ರದ ಗೊಂಬೆ ಆಟ ಆಡಿಸುವವನಿಗೆ ಮೊದಲು ಆಟದ ಪರಿಚಯ ಇರಬೇಕು ಮನುಷ್ಯ ಎಂದ ಮೇಲೆ ತನ್ನಲ್ಲಿ ಸಾವಿರಾರು ಕನಸುಗಳು ಇರುತ್ತವೆ. ಅವುಗಳನ್ನು ಅಭಿವ್ಯಕ್ತ ಪಡಿಸಲು ಗೊಂಬೆಗಳಿಗೆ ಜೀವ ನೀಡುತ್ತಾನೆ. ಆಗ ತನ್ನ ಮನಸ್ಸಿನಲ್ಲಿ ಉಂಡ ಅನುಭವಗಳನ್ನು ಹಂಚಿಕೊಳ್ಳುತ್ತಾನೆ. ಮತ್ತೆ ಆಂಗಿಕ ಅಭಿನಯದ ಮೂಲಕ ಅಭಿವ್ಯಕ್ತ ಪಡಿಸುತ್ತಾನೆ.

ಬೌದ್ಧಿಕವಾಗಿ ಬೆಳೆದ ಮಾನವ ಸೂತ್ರದ ಗೊಂಬೆಗಳನ್ನು ತನ್ನಂತೆ ಕುಣಿಯುವ, ನರ್ತಿಸುವ, ಚಲನಾವಲನ ಕ್ರಿಯಾತ್ಮಕಗೊಳ್ಳುವ, ರಂಗ ಕಲೆಯಲ್ಲಿ ಪ್ರಯೋಗಿಸುವ ಜಾಣ್ಮೆತನವನ್ನು ಕಾಣುತ್ತೇವೆ. ಹೀಗೆ ಪ್ರಯೋಗಗೊಳ್ಳುವ 'ಸೂತ್ರದ ಗೊಂಬೆ ಆಟಗಳು' ಪ್ರೇಕ್ಷಕರ ಮನಸ್ಸನ್ನು ಗೆಲ್ಲುತ್ತವೆ. ಅದರಲ್ಲೂ ಮನೋರಂಜನೆ ನೀಡುವಲ್ಲಿ ಪ್ರಮುಖ ಪಾತ್ರ ವಹಿಸುತ್ತವೆ. ಮನೋರಂಜನೆ ಜೊತೆಗೆ ಯಾವುದೇ ಜಾತಿ–ವೈಷಮ್ಯಗಳಿಲ್ಲದೆ ಮಾನವೀಯ ಮೌಲ್ಯವನ್ನು ಬಿತ್ತರಿಸುತ್ತವೆ.

ಗೊಂಬೀ ಗೌಡರ ಸೂತ್ರದ ಗೊಂಬೆ ಆಟಗಳು ಪೌರಾಣಿಕ ಕಥಾವಸ್ತುವನ್ನಾದರಿಸಿಯೇ ರಚಿತಗೊಂಡಿವೆ. ಮನುಷ್ಯನ ಮೈಮನಗಳಲ್ಲಿ ಈ ಆಟವು ನೆಲೆಯೂರಿವೆ. ಇಂದಿಗೂ ಜನಪ್ರಿಯಗೊಂಡು ಮಾನವರನ್ನು ಆಕರ್ಷಿಸುತ್ತವೆ. ಆ ಆಟದಲ್ಲಿಯೇ ತಲ್ಲೀನವಾಗುವಂತೆ ಮಾಡುತ್ತವೆ.

ವ್ಯಕ್ತಿಗಳ ವರ್ತನೆಗಳನ್ನು ಧಾರ್ಮಿಕ ಹಿನ್ನೆಲೆಯಲ್ಲಿ ಶೋಧಿಸಿ ಸತ್ಯಾಸತ್ಯತೆಯನ್ನು ಕಂಡುಕೊಳ್ಳುವ ವೈಶಿಷ್ಯತೆಯೇ ಈ ಆಟದ ಉದ್ದೇಶವಾಗಿದೆ. ಮನುಷ್ಯನಲ್ಲಿ ಸಹಜವಾಗಿ ಭಿನ್ನತೆ ಕಂಡು ಬರುತ್ತವೆ. ಕೆಲವರಲ್ಲಿ ಸಂಯಮ ಸ್ವಭಾವವಿದೆ. ಉತ್ತಮ ನಡೆ ನುಡಿಗುಣಗುಳುಳ್ಳ ಚಾರಿತ್ರ್ಯದವರು ಇದ್ದಾರೆ. ಅವರ ಮಧ್ಯೆ ದುರಂಹಕಾರದಿಂದ ವರ್ತಿಸುವವರಿದ್ದಾರೆ.

ದುರಂಹಕಾರಿಗಳಲ್ಲಿ "ವಿಷಮತೆ, ಕಾಮ, ಕ್ರೋಧ, ಲೋಭ, ಮೋಹ, ಮದ, ಮಾತ್ಸರ್ಯ" ಎಂಬ ಇಂದ್ರೀಯ ಗುಣಗಳು ಇರುತ್ತವೆ. ಅವುಗಳು ಅತಿಯಾಗಿ ದುರಾಸೆಗೆ ಬಲಿಯಾಗುತ್ತಾನೆ. ಅಂತವರಿಗೆ ಉಳಿಗಾಲವಿಲ್ಲವೆಂಬ ಸಂದೇಶ ತಿಳಿಸುತ್ತದೆ. ಅತೀ "ವ್ಯಾಮೋಹಕ್ಕೊಳಗಾದ ವ್ಯಕ್ತಿಯ ತಲೆಯ ಮೇಲೆ ಜೀವನದ ಕತ್ತಿ ಸದಾ ತುಂಬಿ ತುಳುಕುತ್ತಿರುತ್ತದೆ." ಅತೀ ಆಸೆಗೊಳಗಾದಾಗ ಸಾವು ಸಂಭವಿಸುತ್ತದೆ. ಅಂತವರ ಸಂಹಾರಕ್ಕಾಗಿ ದೇವಲೋಕದಿಂದ ವಿಷ್ಣು ಮಾನವನಾಗಿ ಈ ಧರೆಯಲ್ಲಿ ಜನಿಸುತ್ತಾನೆ. ಉದಾಹರಣೆಗೆ ರಾಮಾಯಣದಲ್ಲಿ ರಾಮನಾಗಿ, ಮಹಾಭಾರತದಲ್ಲಿ ಕೃಷ್ಣನ ಸ್ವರೂಪದಲ್ಲಿ ಹಟ್ಟುತ್ತಾನೆ.

ಈ ಭೂಮಿಯ ಮೇಲೆ ಹುಟ್ಟಿರುವ ಮಧಾಂಧ ವ್ಯಾಘ್ರರ ಸಂಹಾರವೇ ಆಟದ ತತ್ವವಾಗಿದೆ. ಈ ದುಷ್ಟ ಪ್ರಜಾ ಪೀಡಕರು ಈ ಭೂಮಿಗೆ ಭಾರವೆನಿಸಿದ್ದಾರೆ. ಆ ದುರ್ವ್ಯಸನಿಗಳ ಅಹಂಕಾರವನ್ನು ಮುರಿಯಬೇಕು. ಆ ಕಾರಣದಿಂದ ದೇವರೆ ಮಾನವನಾಗಿ ಈ ಭೂ ಲೋಕಕ್ಕೆ ಬರುತ್ತಾನೆ. ಈ ಭೂಮಿಯಲ್ಲಿ ಜನಿಸಿ ಧರ್ಮ ಮತ್ತು ಅಧರ್ಮದ ಆಟಾಟೋಪಗಳನ್ನು ಪರಿಶೀಲಿಸುತ್ತಾನೆ. ಅವುಗಳನ್ನು ತಡೆದು ಮಾನವೀಯ ಮೌಲ್ಯಗಳನ್ನು ಬಿತ್ತ ಬೇಕಾಗಿದೆ. ಆದ್ದರಿಂದ ಮನುಷ್ಯತ್ವದ ಕಾಳಜಿಯನ್ನು ಸಾರುತ್ತದೆ. ಈ ಮಾನವೀಯತೆಯನ್ನು ಕಾಯುವವನು ವಿಷ್ಣುವೇ ಆಗಿದ್ದಾನೆ. ಈ ದೈವವೇ ಜನಪದರ ಆರಾಧ್ಯ ದೈವವಾಗಿದೆ. ಜನಪದರು ಈ ದೇವರ ಮೇಲೆ ಇಟ್ಟಿರುವ ಭಕ್ತಿಯನ್ನು ಎತ್ತಿ ಹಿಡಿಯಲಾಗಿದೆ. ದೈವ ಶಕ್ತಿಯ ಮುಂದೆ ದುಷ್ಟ ಶಕ್ತಿಗಳು ಸರ್ವನಾಶವಾಗುತ್ತಾರೆ ಎಂಬ ಸಂದೇಶವನ್ನು 'ರಾವಣ ವಧಾ' ಆಟದಲ್ಲಿ ಇದೆ.

"ರಾವಣ ವಧಾ" ಆಟದಲ್ಲಿ ರಾವಣನಂತಹ ದುಷ್ಟನನ್ನು ನಾಶ ಮಾಡಲು ವಿಷ್ಣು ಮತ್ತು ಭೂದೇವಿಯಂತಹ ದೇವರುಗಳ ನಡುವೆ ಚರ್ಚೆ ನಡೆಯುತ್ತದೆ. ಆಗ ವಿಷ್ಣುವಿಗೆ ಭೂದೇವಿಯು ರಾವಣನನ್ನು ಸಂಹರಿಸುವಂತೆ ಆಜ್ಞೆ ನೀಡುತ್ತಾಳೆ.

ದುಷ್ಟನಾದ "ರಾವಣನು ದೈವಬಲವುಳ್ಳ ಶಿವನ ಪರಮಭಕ್ತನು ಹೌದು, ಪರಸ್ತ್ರೀ ವ್ಯಾಮೋಹಿ ಹೌದು", ಹಿಡಿದ ಛಲವನ್ನು ಬಿಡದೆ ಸಾಧಿಸುವ ಸ್ವಾರ್ಥಿ. ಪತ್ನಿಯಾದ ಮಂಡೋದರಿಯು ರಾವಣನಿಗೆ ಹೇಳಿದ ನೀತಿ ಪಾಠ ಇಲ್ಲಿ ಮುಖ್ಯವಾಗುತ್ತದೆ. ಕದ್ದು ತಂದ ಸೀತೆಯನ್ನು ರಾಮಚಂದ್ರನಿಗೆ ಒಪ್ಪಿಸಿ,

ನಿಮ್ಮ ತಮ್ಮನಾದ ವಿಭೀಷಣರನ್ನು ಕರೆತಂದು ಈ ಲಂಕೆಯಲ್ಲಿ ಆನಂದದಿಂದ ರಾಜ್ಯಭಾರ ಮಾಡು. ಆಗ ಈ ಭೂ ಮಂಡಲವೇ ನಿನ್ನನ್ನು ಕೊಂಡಾಡುತ್ತಾರೆ. ನಿನ್ನಲ್ಲಿರುವ ಶಿವನ ಭಕ್ತಿಯನ್ನು ಹೊಗಳುತ್ತಾರೆ.

"ಮಹಾಜಯ ರಾಘವಂಗೆ ಒಪ್ಪಿ ನೀ। ನಿನ್ನ ಸಹಜಾತ

ಸಹಿತ ಬಂದು। ವಿಹಿತದಿ ಲಂಕೆಯನಾಳಯ್ಯ। ಸೆರಗೊಡ್ಡಿ

ಬೇಡಿ ಕೊಂಬೆನು ನಾ ನಿನ್ನ। ನಾ ನಿನ್ನ। ಮಹಾರಾಜಾ"[೧೧]

ರಾವಣ ಮಹಾರಾಜನನ್ನು ಕುರಿತು ಮಂಡೋದರಿಯು ಕಾಡಿ, ಬೇಡಿ ಗೋಗರೆಯುತ್ತಿದ್ದಾಳೆ. ನೀತಿ ಭೋದನೆ ಮಾಡುತ್ತಿದ್ದಾಳೆ. ಆದರೆ ರಾವಣ ಅದಕ್ಕೊಪ್ಪದೆ, ಮನ್ನಣೆ ನೀಡದೆ ರಣ ರಂಗಕ್ಕೆ ಧಾವಿಸುತ್ತಾನೆ. ಅಲ್ಲಿಯು ಸಹ 'ರಾಮನು' ರಾವಣನಿಗೆ ನೀತಿ ಮಾತುಗಳನ್ನೇ ಆಡುತ್ತಾನೆ "ನನ್ನೊಡನೆ ಯುದ್ಧ ಬೇಡ" ನನ್ನ ಸತಿ ನನಗೆ ಒಪ್ಪಿಸಿ ಅಸುರರೊಡನೆ ಕೂಡಿ ರಾಜ್ಯವಾಳು" ತಮ್ಮನಾದ ಲಕ್ಷ್ಮಣನಂತೆ ನೋಡಿ ಕೊಳ್ಳುತ್ತೇನೆ.

ಶ್ರೀ ರಾಮಚಂದ್ರನು ರಣರಂಗದಲ್ಲಿ ವಿನಯದಿಂದ ರಾಜ ನೀತಿ'ಯ ಅರಿವನ್ನು ಭೋಧಿಸುತ್ತಾನೆ. ಈ ತತ್ವ ನೀತಿಯನ್ನು ಅರಿಯದೆ ಮದಗಜದಂತೆ ರಾವಣನು ಯುದ್ಧ ರಂಗದಲ್ಲಿ ರಾಮನೊಂದಿಗೆ ಕಾದಾಡುತ್ತಾನೆ. ಆಗ ರಾಮನ ಬಾಣವು ರಾವಣನ ಎದೆಯನ್ನು ಸೀಳುತ್ತದೆ. ರಾವಣನ "ಎದೆಯಲ್ಲಿದ್ದ ಅಮೃತದ ಕುಪ್ಪಿ" ಸೋರಿ ನೆಲಕ್ಕೆ ಬಿದ್ದಾಗ, ರಾವಣನು "ಅಯ್ಯೋ ರಾಮಬಾಣ ಬಂದು ಎದೆಯಲ್ಲಿ ನೆಟ್ಟಿತೇ!"[೧೨] ಎಂದು ಗೋಗರೆಯುತಾ ತಮ್ಮನಾದ ತನ್ನ ವಿಭೀಷಣನನ್ನು ಕರೆದು ನೀತಿ ಭೋಧಿಸುತ್ತಾನೆ. ರಾವಣನು ಸಾಯುವಾಗ ತಪ್ಪನ್ನು ಅರಿತು ಮಮ್ಮಲ ಮರುಗುತ್ತಾ, ಜೀವನಾನುಭವವನ್ನು ವ್ಯಕ್ತಪಡಿಸುತ್ತಾನೆ.

ದುಷ್ಟನಾದ ರಾವಣ ತನ್ನ ಪಾಪ ಕೃತ್ಯ ಫಲವಾಗಿ ತಕ್ಕ ಶಿಕ್ಷೆಯನ್ನು ಅನುಭವಿಸುತ್ತಾನೆ. ಆದರೆ ಏನು ತಪ್ಪು ಎಸಗದ "ಅಭಿಮನ್ಯು ವಧಾ" ಸಮಂಜಸವಲ್ಲದಿದ್ದರೂ ಮುಂದಿನ ಭವಿಷ್ಯದ ಒಳಿತಿಗಾಗಿ ದೈವವೇ ಅಭಿಮನ್ಯುವಿನ ಸಾವನ್ನು ಆಪೇಕ್ಷಿಸುತ್ತದೆ.

ಕ್ಷತ್ರಿಯ ಧರ್ಮದ ವೀರ ಪಟು ಅಭಿಮನ್ಯು ಸಾಹಸಿಯಾಗಿ ನಕ್ಷತ್ರಗಳಂತೆ ಪ್ರಕಾಶಿಸುತ್ತಾನೆ. ವಯಸ್ಸಿನಲ್ಲಿ ಕಿರಿಯನಾದರು ಈತನ ಪಾತ್ರ ದಿರೋದಾತ್ತವಾದುದು. ದ್ರೋಣಚಾರ್ಯರು ರಚಿಸಿದ 'ಮಹಾಕೂಟ ಚಕ್ರವ್ಯೂಹ'ವನ್ನು ಭೇದಿಸುತ್ತಾನೆ ಯುದ್ಧದಲ್ಲಿ ಶೌರ್ಯ ಸಾಹಸದಿಂದ ಕೌರವರನ್ನು ಸಂಹರಿಸುತ್ತಾ ಮುನ್ನೆಡೆಯುತ್ತಾನೆ. ಕ್ಷತ್ರಿಯ ಧರ್ಮವನ್ನು ಪರಿಪಾಲನೆ ಮಾಡುತ್ತಾ, ನ್ಯಾಯ, ನಿಷ್ಠೆಯಿಂದ ದ್ರೋಣಚಾರ್ಯರೊಂದಿಗೆ ಯುದ್ಧ ಮಾಡುತ್ತಿರುವಾಗ, ಬೆನ್ನ ಹಿಂದಿನಿಂದ ಕರ್ಣನು ಬಿಟ್ಟ ಬಾಣಗಳು ಬಂದು ಅಭಿಮನ್ಯುವಿನ ಎರಡು ಕೈಗಳನ್ನು ಕತ್ತರಿಸಿದವು. ಆದರೂ "ಮೊಂಡ ಕೈಗಳಿಂದಲೆ ಯುದ್ಧ ಮಾಡುತ್ತೇನೆ" ಎಂಬ ಛಲವಿದ್ದರು ಸಹ ನೋವಿನ ಭಾದೆ ತಾಳಲಾರದೆ ವೀರಮರಣವನ್ನಪ್ಪುತ್ತಾನೆ.

ಕೌರವರ ಮೋಸ, ವಂಚನೆ, ಕಪಟನಾಟಕ, ಪಕ್ಷ ಪಾತ ಹಾಗೂ ಜ್ಞಾನ ವಯೋವೃದ್ಧರಾದ ಆಚಾರ್ಯ ದ್ರೋಣಚಾರ್ಯರೆ ಅಭಿಮನ್ಯುವಿನ ಪಾಪ ಕೃತ್ಯ ಹತ್ಯೆ ಮಾಡುತ್ತಾರೆ. ಈ ಮೋಸವೆಂಬ

ಕಾಲ ಕೂಪದ ದಳ್ಳೂರಿಯಲ್ಲಿ ಸಿಲುಕಿದ ಅಭಿಮನ್ಯು ದುರ್ಬಲನಾಗುತ್ತಾನೆ. ಅಲ್ಲದೆ ಕಪಟ ನಾಟಕ ಸೂತ್ರಧಾರಿಯೇ ಅಭಿಮನ್ಯುವಿನ ಸಾವನ್ನು ಅಪೇಕ್ಷಿಸುತ್ತಾನೆ. ಅದಕ್ಕೆ ಕಾರಣವನ್ನು ಶ್ರೀಕೃಷ್ಣ ಪರಮಾತ್ಮನೆ ಕೊಡುತ್ತಾನೆ. "ಅಳಿಯನಾದ ಎಳೆಯ ಅಭಿಮನ್ಯು ಸಮರದಲ್ಲಿ ಅಳಿಯಬೇಕು. ಇಲ್ಲದಿದ್ದರೆ ಮುಂದೆ ಕಲಿಯುಗ ಮುಗಿದರೂ ಅವನು ಅಳಿಯುವುದಿಲ್ಲ! ಕ್ಷತ್ರಿಯರು ಚಿರಂಜೀವವಿರುವುದು ಕ್ಷೇಮವಲ್ಲ"[೧೨] ಎಂದು ಶ್ರೀಕೃಷ್ಣ ಪರಮಾತ್ಮನು ಸಮರ್ಥಿಸಿಕೊಳ್ಳುತ್ತಾನೆ.

ರಾಜ್ಯವನ್ನು ಆಳುವ ಅರಸರ ದುರಂಹಕಾರ ಮಿತಿ ಮೀರಿದರೆ, ಅಂತವರಿಗೆ ದೈವವೇ ಶಿಕ್ಷಿಸುತ್ತದೆ. ದುಷ್ಟನಾದ ರಾವಣನ ಸಂಹಾರದಿಂದ ಪ್ರೇಕ್ಷಕರಿಗೆ ಸಮಾಧಾನ ತಂದು ಕೊಡುತ್ತದೆ. ಆದರೆ ಏನು ತಪ್ಪು ಮಾಡದ ನಿರಪರಾಧಿ ಅಭಿಮನ್ಯುವಿನ ಸಾವು ಕರುಳನ್ನು ಕಿವುಚುತ್ತದೆ. ಈ ದುರಂತ ಕಥೆಯು ಮುಂದಿನ ಭವಿಷ್ಯದ ಒಳಿತಿಗಾಗಿ ಇಂದೇ ನಿರಪರಾಧಿಗಳು ದುಷ್ಟರಿಂದ ಸಾವನ್ನಪ್ಪುತ್ತಾರೆ ಎಂಬ ಸಂದೇಶವಿದೆ.

ಜಾನಪದೀಯ ಅಂಶಗಳನ್ನೊಳಗೊಂಡ ಈ ಸೂತ್ರದ ಗೊಂಬೆ ಆಟಗಳು ಮಾನವೀಯ ಮೌಲ್ಯಗಳನ್ನು ಬಿತ್ತುತ್ತವೆ. ಈ ಎರಡು ಆಟಗಳಲ್ಲಿ ಸೂತ್ರಧಾರನೇ ಪ್ರಮುಖ ಪಾತ್ರವಹಿಸುತ್ತಾನೆ. ಸ್ತ್ರೀ ಮತ್ತು ಪುರುಷರ ವೇಷಭೂಷಣದ ಕಲಾವಂತಿಕೆಯ ಗೊಂಬೆಗಳ ನಟನೆಗೆ ಸೂತ್ರಧಾರನ ಮಾತಿನ ಅನುಕರಣ ವ್ಯಯ ಮುಖ್ಯವಾಗುತ್ತದೆ. ಪ್ರಾಸಂಗಿಕ ದೃಶ್ಯಗಳಿಗೆ ತಕ್ಕಂತೆ ಸಂಭಾಷಣೆ ನೀಡುತ್ತಾನೆ. ನಿರೂಪಣೆ ಮತ್ತು ಸಂಭಾಷಣೆ ಕಾರ್ಯ ಯಶಸ್ವಿಗೊಳ್ಳಲು ಭಾಗವತನು ನೃತ್ಯ ಮತ್ತು ಸನ್ನಿವೇಶಗಳ ಸಂದರ್ಭದಲ್ಲಿ ರಾಗ ಮತ್ತು ಲಯದಿಂದ ಹಾಡುಗಳನ್ನು ಹೇಳಿ ರಸಾನುಭವ ನೀಡುವುದರ ಮೂಲಕ ಪ್ರಚೋಧಿಸುತ್ತಾನೆ. ಈ ರಸಾನುಭವ ಜೊತೆಗೆ ಹನುಮನಾಯಕನ ಹಾಸ್ಯ ಪಾತ್ರವು ಬೇಸರವನ್ನು ಕಳೆಯುತ್ತದೆ. ಹನುಮನಾಯಕ ಗೊಂಬೆ ಆಟಗಳ ಮುಖ್ಯ ಸಂದೇಶವಾಹಕನಾಗಿ, ಹಾಸ್ಯದ ಮೂಲಕ ಮುಂದೆ ನಡೆಯುವ ಆಟದ ಕಥಾವಸ್ತುವನ್ನು ಸೂತ್ರಧಾರನಾಗಿ ನಿರೂಪಣೆ ಮಾಡುತ್ತಾನೆ. ಹೀಗೆ "ಜನಪ್ರಿಯಗೊಂಡ ಗೊಂಬೆ ಆಟವು ಭಾರತದ ದೇಶದ ತಾಯಿಮನೆ ಆಟ" ಎಂದು ಕರೆಸಿಕೊಂಡಿದೆ.

### ೩.೫. ಕೊಂಡಜ್ಜಿ ಬಸಪ್ಪನ ಜೀವನ ಚರಿತ್ರೆ

"ಕೊಂಡಜ್ಜಿ ಬಸಪ್ಪ" ಮೌಲ್ಯಯುತವಾದ ಅಪರೂಪದ ಕೃತಿ. ಈ ಕೃತಿಯನ್ನು ಮುದೇನೂರು ಸಂಗಣ್ಣನವರು ೨೦೦೦ದ ಇಸವಿಯಲ್ಲಿ ಸಂಪಾದಿಸುತ್ತಾರೆ. ಇದೊಂದು ಆತ್ಮಕಥನವಾಗಿದೆ. 'ಕೊಂಡಜ್ಜಿ ಬಸಪ್ಪ'ನವರ ಇತಿ ವೃತ್ತಾಂತವನ್ನು ಕುರಿತು ಐದು ಅಧ್ಯಾಯಗಳಾಗಿ ವಿಂಗಡಿಸಲಾಗಿದೆ.

ವಿದ್ಯಾರ್ಥಿ ಕೊಂಡಜ್ಜಿ, ರಾಜ್ಯದ ರಾಜಕಾರಣದಲ್ಲಿ ಕೊಂಡಜ್ಜಿ, ಸ್ಕೌಟ್ ಸೈನಿಕ ಕೊಂಡಜ್ಜಿ, ರಾಷ್ಟ್ರ ರಾಜಕಾರಣದಲ್ಲಿ ಕೊಂಡಜ್ಜಿ, ಇವರು ನಮ್ಮ ಕೊಂಡಜ್ಜಿ ಈ ರೀತಿಯಾಗಿ ಕೊಂಡಜ್ಜಿ ಬಸಪ್ಪನ ಜೀವನ ಚರಿತ್ರೆಯನ್ನು ವಿವರಿಸಲಾಗಿದೆ.

ನಮ್ಮ ನಾಡಿನ ಶ್ರೇಷ್ಠ ದಕ್ಷ ಆಡಳಿತಗಾರ, ರಾಜಕಾರಣಿ, ನಿಷ್ಠೆ, ಪ್ರಮಾಣಿಕತೆ ಹಾಗೂ ಶಿಸ್ತಿನ ಸಿಪಾಯಿಯಾಗಿದ್ದವರು ಕೊಂಡಜ್ಜಿ ಬಸಪ್ಪನವರು. ಇವರ ಆತ್ಮ ಚರಿತ್ರೆಯನ್ನು ಆಸಕ್ತಿ, ಶ್ರಮ, ಶ್ರದ್ಧೆ, ಒಡನಾಟದಿಂದ ಮುದೇನೂರು ಸಂಗಣ್ಣನವರು ಸಂಗ್ರಹಿಸಿದ್ದಾರೆ.

ಕೊಂಡಜ್ಜಿ ಬಸಪ್ಪನವರು ದಾವಣಗೆರೆ ಜಿಲ್ಲೆಯ ಹರಿಹರ ತಾಲೂಕಿನ, ಕೊಂಡಜ್ಜಿ ಎಂಬ ಗ್ರಾಮದಲ್ಲಿ, ತಂದೆ 'ಸಿಂಗಪ್ಪ', ತಾಯಿ 'ಹಾಲಮ್ಮ' ಎಂಬ ದಂಪತಿಗಳಿಗೆ ಮೂರನೆಯ ಮಗನಾಗಿ, ಬಡ ಕುಟುಂಬದಲ್ಲಿ ೧೧-೧೨-೧೯೧೫ರಂದು ಜನಿಸುತ್ತಾರೆ. ಕಿತ್ತು ತಿನ್ನುವ ಬಡತನದಲ್ಲಿಯು ಮಗನನ್ನು ಓದಿಸಬೇಕೆಂಬ ಆಸೆ ತಂದೆ-ತಾಯಿಗಳಲ್ಲಿ ಇತ್ತು. ಆ ಆಸೆಯನ್ನು ಕೊಂಡಜ್ಜಿಯವರು ನೆರವೇರಿಸಿದರು. ಕೊಂಡಜ್ಜಿ ಬಸಪ್ಪನವರು ವಿದ್ಯಾರ್ಥಿ ಜೀವನ ಅನುಭವಿಸುತ್ತಾ, ಕಷ್ಟ ನೋವುಗಳನ್ನು ಎದುರಿಸುತ್ತಾ ಶೈಕ್ಷಣಿಕವಾಗಿ ಹೀಗೆ ಬೆಳೆದರು ಎಂಬುದನ್ನು ಮುದೇನೂರು ಸಂಗಣ್ಣನವರು ನಿರೂಪಣೆ ಮಾಡುತ್ತಾರೆ.

ಕೊಂಡಜ್ಜಿಯಲ್ಲಿ ಪ್ರಾಥಮಿಕ ಶಿಕ್ಷಣ ಮುಗಿಸಿದ ಇವರು, ಮಲೆಬೆನ್ನೂರಿನಲ್ಲಿ ಇಂಗ್ಲೀಷ್ ಲೋಯರ್ ಸೆಕೆಂಡರಿಯನ್ನು ೧೯೩೧ರಲ್ಲಿ ಮುಗಿಸಿದರು. ಮತ್ತೆ ಮುಂದಿನ ಓದಿನ ಚಿಂತೆ ಕೊಂಡಜ್ಜಿ ಬಸಪ್ಪನನ್ನು ಕಾಡುತ್ತಿತ್ತು ಆಗ ಆಪ್ತ ಭಾಂಧವರಂತೆ ಸಹಾಯ ನೀಡಿದವರು ಈಚಗಟ್ಟ ಬಸಪ್ಪ ಮತ್ತು ಹನುಮನಹಳ್ಳಿ ಮಹಾದೇವಪ್ಪನವರ ನೆರವಿನಿಂದ ದಾವಣಗೆರೆಯ ಸರ್ಕಾರೀ ಹೈಸ್ಕೂಲಿನಲ್ಲಿ ವಿದ್ಯಾರ್ಥಿ ವೇತನ ಮತ್ತು ಸಿರಿಗೆರೆ ಮಠದ ವಿದ್ಯಾರ್ಥಿ ನಿಲಯದಲ್ಲಿ ವಸತಿ ವ್ಯವಸ್ಥೆ ದೊರಕಿತು. ಈ ಎಲ್ಲಾ ಸಹಾಯ ಸಹಕಾರದಿಂದ ೧೯೩೪ರಲ್ಲಿ ಎಸ್ಸೆಸ್ಸೆಲ್ಲಿ ಪಾಸಾದರು. ಶೈಕ್ಷಣಿಕವಾಗಿ ಹಂತ-ಹಂತವಾಗಿ ಶಿಕ್ಷಣದಲ್ಲಿ ವಿಕಾಸ ಹೊಂದುತ್ತಾ ಹೋದಂತೆ. ಮುಂದಿನ ವಿದ್ಯಾಭ್ಯಾಸದ ಆರ್ಥಿಕ ಚಿಂತನೆಗೆ ಒಳಗಾದರು. ಅಲ್ಲಿಯೂ ಸಹ ಡಾ. ಮಹಂತಯ್ಯ ಎಂಬ ವೈದ್ಯರ ಸಹಕಾರ ದೊರಕಿತು. ಅಂದಿನ ಮೈಸೂರು ಸಂಸ್ಥಾನದಲ್ಲಿ ಎರಡು ಸಂಸ್ಥಾನಗಳಲ್ಲಿ ಮಾತ್ರ ಇಂಟರ್ ಮೀಡಿಯೆಟ್ ಕಾಲೇಜುಗಳಿದ್ದವು. ಒಂದು ಮೈಸೂರು ಸಂಸ್ಥಾನ, ಇನ್ನೊಂದು ಬೆಂಗಳೂರು ಸಂಸ್ಥಾನಗಳಲ್ಲಿ ಮಾತ್ರ ಶಿಕ್ಷಣ ದೊರಕುತ್ತಿತ್ತು. ವೈದ್ಯರ ಸಹಕಾರದಿಂದ ಬೆಂಗಳೂರು ಸಂಸ್ಥಾನಗಳಲ್ಲಿ ಇಂಟರ್ ಮೀಡಿಯೆಟ್ ಓದುವ ಅವಕಾಶ ದೊರಕಿತು. ಹಾಗೆಯೇ ತೋಟದಪ್ಪ ಉಚಿತ ವಿದ್ಯಾರ್ಥಿನಿಲಯದಲ್ಲಿ ವಸತಿ ವ್ಯವಸ್ಥೆ ಕಲ್ಪಿಸಿತು. ೧೯೩೬ರಲ್ಲಿ ಇಂಟರ್ ಮೀಡಿಯೆಟ್ ಮುಗಿಸಿದರು. ಬೆಂಗಳೂರಿನಲ್ಲಿಯೇ ಬಿ.ಎಸ್ಸಿ. ಸೇರಿದರು. ಬೆಂಗಳೂರಿನ ಸುಪ್ರಸಿದ್ಧ ಸೆಂಟ್ರಲ್ ಕಾಲೇಜಿನಲ್ಲಿ ಸಸ್ಯಶಾಸ್ತ್ರ, ಪ್ರಾಣಿಶಾಸ್ತ್ರ ಎಂಬ ಐಚ್ಚಿಕ ವಿಷಯಗಳನ್ನು ಆಯ್ಕೆ ಮಾಡಿಕೊಂಡು ಓದಿದರು. ೧೯೩೮ರಲ್ಲಿ ಬಿ.ಎಸ್ಸಿ ಪದವಿದರರಾದರು.

ಪದವಿದರರಾದ ಕೊಂಡಜ್ಜಿಯವರು ಕೆಲಸ ಹುಡುಕಬೇಕೆಂಬ ಹಂಬಲ ಮತ್ತು ಮುಂದೆ ಓದಬೇಕೆಂಬ ಆಕಾಂಕ್ಷೆಯು ಇತ್ತು. ಸರಳ ಉಡುಗೆ ತೊಡುಗೆ ತೊಡುತ್ತಿದ್ದ ಕೊಂಡಜ್ಜಿ ಬಸಪ್ಪನವರ ನಗುಮುಖದ ಸ್ವಭಾವವನ್ನು ಶ್ರೀಮಂತ ವ್ಯಕ್ತಿ ಗೌಡ್ರ ಚನ್ನ ಬಸಪ್ಪನವರು ಕಂಡರು. ಕೊಂಡಜ್ಜಿಯವರ ಸುಂದರವಾದ ಯೌವ್ವನದ ಸಾತ್ವಿಕ ಮುಖವನ್ನು ಕಂಡು ಚನ್ನಬಸಪ್ಪನವರು ತನ್ನ ಮಗಳನ್ನು ಕೊಡಲು ಒಪ್ಪಿದರು. ಚನ್ನ ಬಸಪ್ಪನವರ ಮೂರನೆ ಹೆಂಡತಿ ಗೌರಮ್ಮನವರ ಮಗಳು 'ಸರ್ವಮಂಗಳಕ್ಕ' ಎಂಬ ಕನ್ನೆಯನ್ನು ಧಾರೆಯೆರೆದು. ಅಳಿಯನನ್ನಾಗಿ ಸ್ವೀಕರಿಸಿದರು.

ದೂರ ದೃಷ್ಟಿ ಆಲೋಚನೆಯಿಂದ ಮಾವ ಚನ್ನ ಬಸಪ್ಪನವರು ಅಳಿಯನನ್ನು ಕಾನೂನು ವ್ಯಾಸಂಗ ಓದಲು ಹಚ್ಚಿದರು. ಪುಣೆಯ 'ಲಾ ಕಾಲೇಜಿನ ನ್ಯಾಯಶಾಸ್ತ್ರದ ವಿದ್ಯಾರ್ಥಿಯಾಗಿ ಕೊಂಡಜ್ಜಿ

ಬಸಪ್ಪನವರು ಸೇರಿದರು. ಅಲ್ಲಿ ಹೆಚ್.ಎಲ್.ನಾಗೇಗೌಡರ ಸಹಪಾಠಿಗಳಾದರು. ಅವರೊಂದಿಗೆ ೧೯೩೭–೧೯೪೦ರ ವರೆಗೆ ಆಪ್ತ ಸ್ನೇಹಿತರಾಗಿಯೇ ಇದ್ದರು. ಅವರಿಬ್ಬರ ಒಡನಾಟ, ಸಂಬಂಧ ಹಾಗೂ ಕೊಂಡಜ್ಜಿಯವರ ಸಾತ್ವಿಕ ಗುಣಗಳನ್ನು ವಿವರಿಸಲಾಗಿದೆ. "ಕೊಂಡಜ್ಜಿ ವಿದ್ಯಾರ್ಥಿಯಾಗಿ ಸೋಮಾರಿ ಎನ್ನಬೇಕು ಯಾವ ಸಹಪಾಠಿ ಎಷ್ಟೇ ಕರೆದರೂ ಕುದುರೆ ರೇಸಿಗೆ ಹೋದಾತನಲ್ಲ. ಅನ್ಯ ಯಾವ ಹವ್ಯಾಸಗಳನ್ನು ನಾನು ಆತನಲ್ಲಿ ಕಾಣಲಿಲ್ಲ. ಮೂವತ್ತೆರಡು ಹಲ್ಲು ಕಾಣುವಂತೆ ನಗುವುದೊಂದೇ ಆತನ ಹವ್ಯಾಸ ಹೀಗಾಗಿ ಆತ ಎಲ್ಲರಿಗೂ ಬೇಕಾದ ಬಸವಣ್ಣ ಆಗಿದ್ದ"[೧೪] ಸಂಯಮ ನಿಷ್ಠೆವುಳ್ಳ ಕೊಂಡಜ್ಜಿ ಬಸಪ್ಪನವರು ಕಾನೂನು ವ್ಯಾಸಂಗ ಪರೀಕ್ಷೆಯಲ್ಲಿ ಉತ್ತೀರ್ಣರಾದರು.

ಎರಡು ವರ್ಷಗಳ ಕಾಲ ಶಿವಮೊಗ್ಗದ ಹೆಚ್ ಲಿಂಗಪ್ಪ ಎಂಬ ವಕೀಲರ ಕೈ ಕೆಳಗೆ ಯುವ ವಕೀಲನಾಗಿ ಕೊಂಡಜ್ಜಿ ಬಸಪ್ಪ ತರಬೇತಿ ಪಡೆದರು. ಮಾವನವರ ಜವಾಬ್ದಾರಿಯಿಂದ ೧೯೪೧ ಜನವರಿಯೆಂದು ದಾವಣಗೆರೆಯಲ್ಲಿ ವಕಾಲತ್ತು ಆರಂಭಿಸಿದರು. ತನ್ನ ಕಕ್ಷಿದಾರರಿಗೆ ನ್ಯಾಯ ಒದಗಿಸಿ ಕೊಟ್ಟ ಸೌಹಾರ್ದ ಮನೋಭಾವನೆ ಬೆಳೆಸುತ್ತಿದ್ದರು ವೃತ್ತಿಯೆ ನ್ಯಾಯವಾದಿಯ ಲಕ್ಷಣವಲ್ಲವೆಂದು ಸಮಾಜಸೇವಾ ಕಾರ್ಯಗಳಲ್ಲಿ ತೊಡಗುತ್ತಿದ್ದರು. ಹೀಗೆ ಕರ್ತವ್ಯ ನಿಷ್ಠೆಯ ಜನಾನುರಾಗಿ ವಕೀಲರೆನಿಸಿದರು.

ಮಾವನವರ ಪ್ರಭಾವ ಮತ್ತು ಮಿತ್ರ ನಾಗೇಗೌಡರ ನೆರವಿನಿಂದ ಕೊಂಡಜ್ಜಿಯವರು ರಾಜಕೀಯ ಕಣಕ್ಕೆ ಇಳಿದರು. ೧೯೪೩ರಲ್ಲಿ ಚಿತ್ರದುರ್ಗ ಜಿಲ್ಲಾ ಬೋರ್ಡ್ ಚುನಾವಣೆಗಳು, ಬಂದವು ಕೊಂಡಜ್ಜಿಯವರು ಹರಿಹರ ತಾಲ್ಲೂಕಿನ ಮತ ಕ್ಷೇತ್ರದಿಂದ ಸ್ವತಂತ್ರ ಅಭ್ಯರ್ಥಿಯಾಗಿ ನಾಮಪತ್ರ ನೀಡಿದರು. ಈ ಚುನಾವಣೆಯಲ್ಲಿ ಕೊಂಡಜ್ಜಿ ಬಸಪ್ಪನವರು ಸೋತು ಗೆದ್ದರು. ಅದರಿಂದ ಚಿತ್ರದುರ್ಗಜಿಲ್ಲಾ ಬೋರ್ಡಿನ ಸದಸ್ಯರಾದರು. ನಂತರ ಯಾವುದೇ ಸಾರ್ವಜನಿಕ ಧೋರಣೆ ಇಲ್ಲದೆ ಮೈಸೂರು ಸಂಸ್ಥಾನದಲ್ಲಿ ಅಧ್ಯಕ್ಷರೆಂಬ ಪ್ರಸಿದ್ಧಿ ಸಿಕ್ಕಿತು.

ಚಿಕ್ಕವಯಸ್ಸಿನಲ್ಲಿಯೆ ಅಧ್ಯಕ್ಷರಾಗಿದ್ದ ಕೊಂಡಜ್ಜಿಯವರು ೧೯೪೪ರಿಂದ ೧೯೪೬ರ ವರೆಗೂ ಸಾಮಾಜಿಕ ಸೇವ ಕಾರ್ಯಗಳಲ್ಲಿ ತೊಡಗಿಸಿಕೊಂಡರು. ಚಿತ್ರದುರ್ಗ ಮತ್ತು ದಾವಣಗೆರೆಯ ಸರ್ವತೋಮುಖ ಅಭಿವೃದ್ಧಿಗಾಗಿ ದುಡಿದರು. ಸರ್ಕಾರಿ ಶಾಲಾ ಕಾಲೇಜುಗಳನ್ನು ಸ್ಥಾಪಿಸಿದರು. ಗ್ರಾಮೀಣ ಪ್ರದೇಶಗಳಲ್ಲಿ ಸಂಚರಿಸಿ ಅಲ್ಲಿನ ವಾಸ್ತವ ಬೇಕು ಬೇಡಿಕೆಗಳಿಗೆ ಆಧ್ಯತೆ ನೀಡಿದರು. ದಮನಿತ ವರ್ಗದ ಶಿಕ್ಷಣ ವಂಚಿತ ಮಕ್ಕಳ ಭವಿಷ್ಯಕ್ಕಾಗಿ ಶ್ರಮಿಸಿದರು.

ಸಮಾಜದಲ್ಲಿ ತುಂಬಿ ತುಳುಕುತ್ತಿರುವ ಮೌಢ್ಯ, ಸಂಪ್ರದಾಯ ಹಾಗೂ ಪರಂಪರಾನುಗತ ರೂಢಿ ಪದ್ಧತಿಗಳಿಗೆ ತೆರೆಹಾಕಿದರು. ಶಿಕ್ಷಣ ನೀಡುವುದರ ಮೂಲಕ ಮಾನವೀಯ ಮೌಲ್ಯಗಳನ್ನು ಬಿತ್ತಿದರು. "ವಿದ್ಯೆಗಿಂತ ವಿವೇಕ ಮುಖ್ಯ" ಎಂಬ ತತ್ವವನ್ನು ಅಳವಡಿಸಿಕೊಂಡಿದ್ದರು. ಬಡ ವಿದ್ಯಾರ್ಥಿಗಳಿಗೆ ವಸ್ತ್ರದಾನ ಮಾಡಿದರು. ಶಿಕ್ಷಣದಲ್ಲಿ ಸಮಾನತೆ ನೀಡಿದಾಗ ಮಾತ್ರ, ಅಧಿಕಾರದಾಹವುಳ್ಳ ಬುದ್ಧಿಜೀವಿಗಳನ್ನು ಮಟ್ಟ ಹಾಕಲು ಸಾಧ್ಯ ಎಂಬ ರಾಷ್ಟ್ರ ಪ್ರಜ್ಞೆ ಹೊಂದಿದ್ದರು.

ಜನಪ್ರಿಯಗೊಂಡ ಕೊಂಡಜ್ಜಿಯವರು ೧೯೪೮ ರಲ್ಲಿ ದಾವಣಗೆರೆ ಕ್ಷೇತ್ರದಿಂದ ಸ್ಪರ್ಧಿಸಿ ಅವಿರೋಧ ಆಯ್ಕೆಯಾದರು. ಇಲ್ಲಿಯು ಸಹ ಸಮಾಜ ಸೇವಾಕಾರ್ಯಗಳಲ್ಲಿ ಆಸಕ್ತಿ ಹೊಂದಿದ್ದರು. ಈ ಸೇವಾ ಮನೋಭಾವನೆಯನ್ನು ಕಂಡ ಮೈಸೂರು ಅರಸರು ಸಂತೃಪ್ತರಾಗಿ 'ಜನಸೇವಾಸಕ್ತ' ಎಂಬ ಪ್ರತಿಷ್ಠಿತ ಬಿರುದು ನೀಡಿ, ಬಂಗಾರದ ಪದಕದೊಂದಿಗೆ ಗೌರವಿಸಿದರು.

ಪ್ರತಿಷ್ಠಿತ ವ್ಯಕ್ತಿಗಳ ಗೌರವಕ್ಕೆ ಪಾತ್ರರಾದ ಕೊಂಡಜ್ಜಿಯವರು ರೈತರ ಏಳ್ಗೆಗಾಗಿ ಶ್ರಮಿಸಿದರು. ರೈತರು "ದಲ್ಲಾಳಿಗಳ ಹತ್ತಿರ ಕೈ ಒಡ್ಡುವ ದೈ ನೇಸಿ ಪದ್ಧತಿಯನ್ನು ತಪ್ಪಿಸಲು ಸುಲಭ ಮಾರ್ಗ ಕಂಡುಕೊಂಡರು. ದಾವಣಗೆರೆಯಲ್ಲಿ ನೊಂದಾಯಿತ ವ್ಯವಸಾಯಗಾರರ ಪರಿವರ್ತನ ಕೈ ಗಾರಿಕಾ ಮತ್ತು ವ್ಯಾಪಾರೋದ್ಯಮ ಸಹಕಾರ ಸಂಘವನ್ನು ೧.೮.೧೯೫೦ ರಲ್ಲಿ ಸ್ಥಾಪಿಸಿದರು."[೧೫] ಕೃಷಿ ಮಾರಾಟ ಸುಧಾರಣೆಗಾಗಿ ಹೊಸ ಮಾರ್ಗ ಅನ್ವೇಷಣೆ ಮಾಡಿದರು.

ಈ ಸೇವಾ ಯೋಜನೆಯನ್ನು ಕಂಡ ಮಾನ್ಯ ಮುಖ್ಯಮಂತ್ರಿ ನಿಜಲಿಂಗಪ್ಪನವರು ೧೯೬೨ ರಲ್ಲಿ ಸಹಕಾರ ಖಾತೆಯ ಉಪಮುಖ್ಯಮಂತ್ರಿಗಳನ್ನಾಗಿ ಆಯ್ದುಕೊಂಡರು. ಉಪಮಂತ್ರಿಗಳಾಗಿ ಅಧಿಕಾರ ಸ್ವೀಕರಿಸಿದ ಕೊಂಡಜ್ಜಿಯವರು ಪ್ರತಿಹಳ್ಳಿಗೂ ಒಂದೊಂದು ಸೇವಾ ಸಹಕಾರ ಸಂಘವನ್ನು ಸ್ಥಾಪಿಸಿದರು. ಸಮಾಜ ಸೇವೆ ಮತ್ತು ಮಾವನವರ ಪ್ರಭಾವದಿಂದ ೧೯೫೦ ರಲ್ಲಿ ಪ್ರಬಲ ರಾಜಕೀಯ ಪಕ್ಷ ಸೇರಿದರು. ಚಿತ್ರದುರ್ಗ ಜಿಲ್ಲೆಯ ಯುವ ಕಾಂಗ್ರೇಸ್ ಪಕ್ಷದ ಅಧ್ಯಕ್ಷರಾದರು. ರಾಜಕೀಯದಲ್ಲಿದ್ದರು ಸಹ ಜನರ ಹಿತಾಸಕ್ತಿಯನ್ನೆ ಬಯಸುತ್ತಿದ್ದರು. ಆದರೆ ಯಾವುದೇ ಪ್ರಗತಿಪರ ಚಳುವಳಿಗಳಲ್ಲಿ ಸಿಲುಕಿಕೊಂಡವರಲ್ಲ ರಾಜಕೀಯದಲ್ಲಿ ಗೆದ್ದರು ಸೋತರು ಸಮಾಜ ಸೇವಾ ನಿಷ್ಠವಂತರಾಗಿದ್ದರು. ರಾಜಕೀಯ, ಸಾಮಾಜಿಕ, ಧಾರ್ಮಿಕ ಸೇವೆಯಲ್ಲಿದ್ದು. ಕುಲ ದೈವ ಚಿಗಟೇರಿಯ ನಾರದ ಮುನಿಯ ಪರಮ ಭಕ್ತರಾಗಿದ್ದರು. ಪ್ರತಿ ವರ್ಷ ನಡೆಯುವ 'ನಾರದ ಮುನಿದೇವರ' ರಥೋತ್ಸವದಲ್ಲಿ ಭಾಗವಹಿಸುತ್ತಿದ್ದರು. ೧೯೪೫ ರಲ್ಲಿ "ಚಿತ್ರದುರ್ಗ ಜಿಲ್ಲಾ ಬೋರ್ಡ ಅಧ್ಯಕ್ಷರಾದ ಶ್ರೀ ಕೊಂಡಜ್ಜಿ ಬಸಪ್ಪನವರು ರಥೋತ್ಸವಕ್ಕೆ ಆಗಮಿಸುತ್ತಾರೆ. ಅವರಿಗೆ ಬಿಡದಿಯ ವ್ಯವಸ್ಥೆ ಮಾಡಿ[೧೬] ಟಿ.ಎಂ. ಗುರುಮೂರ್ತಯ್ಯ ಹೇಳಿದ ಮಾತುಗಳನ್ನು ಉಲ್ಲೇಖಿಸುತ್ತಾರೆ.

ಸಜ್ಜು ಗೊಳಿಸಿದ ಕಟ್ಟಡದ "ಒಳಗೆ ಬರುತ್ತಲೇ ಕುರ್ಚಿ ಮೇಜುಗಳನ್ನು ಕಂಡು ನಕ್ಕರು. ನಾನು ಬಂದಿರುವುದು ನಮ್ಮ ದೇವರ ರಥೋತ್ಸವದಲ್ಲಿ ಪಾಲ್ಗೊಂಡು ಆಶೀರ್ವಾದ ಪಡೆಯಲು, ಇವುಗಳ ಮೇಲೆ ಕುಳಿತು ಅಧ್ಯಕ್ಷರಾಗಿ ಮೆರೆಯಲು ಅಲ್ಲ"[೧೭] ಎಂದು ಹೇಳಿದ ಕೊಂಡಜ್ಜಿ ಬಸಪ್ಪನವರ ಸರಳ ವ್ಯಕ್ತಿತ್ವವನ್ನು ಕಟ್ಟಿ ಕೊಡುತ್ತವೆ. ಚಿಗಟೇರಿ ಗ್ರಾಮದ ಸರ್ವತೋಮುಖ ಅಭಿವೃದ್ಧಿಗಾಗಿ ಸಹಾಯ ನೀಡಿದರು. "ಶ್ರೀ ನಾರದ ಮುನಿ ವಿಧ್ಯಾವರ್ಧಕ ಸಂಘ" ಎಂಬ ಹೈಸ್ಕೂಲು ಮತ್ತು ದೇವಸ್ಥಾನದ ಕೋಣೆಗಳನ್ನು ಸ್ಥಾಪಿಸಿದರು.

೧೯೬೨ ರಲ್ಲಿ ತೃತೀಯ ಮಹಾಚುನಾವಣೆ ನಡೆಯಿತು. ದಾವಣಗೆರೆ ಕ್ಷೇತ್ರದ ಶಾಸನ ಸಭೆಯ ಕಾಂಗ್ರೆಸ್ ಅಭ್ಯರ್ಥಿಯಾಗಿ ಸ್ಪರ್ಧಿಸಿದರು. ಹತ್ತು ಸಾವಿರ ಕಮ್ಯೂನಿಸ್ಟ ಮತಗಳಿಂದ ಚುನಾಯಿತಾರಾದರು.

ಕರ್ನಾಟಕ ರಾಜ್ಯದ ಸಹಕಾರ, ವಾರ್ತೆ ಮತ್ತು ಅಬ್ಕಾರಿ ಖಾತೆಯ ಉಪಸಚಿವರಾದರು. ಕೊಂಡಜ್ಜಿಯವರು ಸಚಿವರಾದರೂ, ಮಂತ್ರಿಯಾದರೂ ಕರ್ತವ್ಯ ನಿಷ್ಠೆಯನ್ನು ಮರೆಯುತ್ತಿರಲಿಲ್ಲ ಸಮಾಜದ ಏಳ್ಗೆಗಾಗಿಯೇ ದುಡಿಯುತ್ತಿದ್ದರು. ಶಿಸ್ತಿನ ಸಿಪಾಯಿಗಳಾಗಿದ್ದರು. ಸ್ಕೌಟ್ ಮತ್ತು ಗೈಡ್‌ಗಳಲ್ಲಿ ತುಂಬಾ ಆಸಕ್ತಿ ಹೊಂದಿದ್ದರು.

ಸ್ಕೌಟ್ ಮತ್ತು ಗೈಡ್ ಮಾನವೀಯ ಸದ್ಗುಣಗಳು ಮತ್ತು ನೈತಿಕ ಮೌಲ್ಯಗಳನ್ನು ರೂಪಿಸುತ್ತವೆ. ಎಂಬ ತತ್ವವನ್ನು ಅರಿತ್ತಿದ್ದರು. ಸ್ಕೌಟ್ ಶಿಬಿರಗಳಲ್ಲಿ ಪಾಲ್ಗೊಳ್ಳುತ್ತಿದ್ದ ಕೊಂಡಜ್ಜಿಯವರು ದೇಶದ ಹಿತಕ್ಕಾಗಿ ಶ್ರಮಿಸಿದರು. ೧೯೫೦ ರಿಂದ ೧೯೬೦ರ ವರೆಗೆ ಸ್ಕೌಟ್ ಮತ್ತು ಗೈಡ್ಸ್ ಜಿಲ್ಲಾ ಕಮೀಷನರ್ ಆದರು. ಸ್ಕೌಟ್ ಸೇವೆಯಲ್ಲಿ ನಿರತರಾದ ಕೊಂಡಜ್ಜಿಯವರು ಮಾಸಿಕವೇತನವನ್ನು ಪಡೆಯದೆ ನಿರಾಕರಿಸಿದ್ದರು. ಈ ಮನೋಭಾವ ಪ್ರೌವೃತಿ ಕೊಂಡಜ್ಜಿಯವರನ್ನು ಬಿಟ್ಟರೆ ಮತ್ಯಾರಿಗೂ ಬರಲು ಸಾಧ್ಯವಿಲ್ಲ.

"ಬಸಪ್ಪನವರ ಸಾಮಾಜಿಕ ಹಾಗೂ ಸ್ಕೌಟ್ ಸೇವೆಯ ಅಗಾಧತೆಯನ್ನು ಗುರುತಿಸಿ ಕನ್ನಡ ನಾಡಿನ ಪರವಾಗಿ ಅರವತ್ತರ ಹಬ್ಬವನ್ನು ೧೯೭೬ ರಲ್ಲಿ ಬೆಂಗಳೂರಲ್ಲಿ ಅದ್ದೂರಿಯಾಗಿ, ಹೃದಯ ಸ್ಪರ್ಶಿಯಾಗಿ ಏರ್ಪಡಿಸಿ ಅಭಿನಂದಿಸಲಾಯಿತು. ಆ ಶುಭ ಸಂದರ್ಭದಲ್ಲಿ ಸಾರ್ವಜನಿಕರ ಪರವಾಗಿ ಅವರಿಗೆ ಒಂದು ಲಕ್ಷ ರೂಪಾಯಿಗಳ ಹಮ್ಮಿಣಿಯನ್ನು ಅರ್ಪಿಸಲಾಯಿತು. ಅತ್ಯಂತ ವಿನಯದಿಂದ ಸ್ವೀಕರಿಸಿದ ಆ ಮೊತ್ತವನ್ನು ಸ್ಕೌಟ್ ಚಳವಳಿಗೇ ಬಳಸುವಂತೆ ವಿನಂತಿಸಿ ನೀಡಿದರು."[೧೮] ಈ ಘನಮನ ಸಂಪನ್ನಯುಳ್ಳ ಕೊಂಡಜ್ಜಿಯವರು ಸ್ಕೌಟ್ ಮತ್ತು ಗೈಡ್ಸ್ ಚಳುವಳಿಗೆ ಸಲ್ಲಿಸಿದ ಗಣನೀಯ ಸೇವೆಗಾಗಿ ೧೯೮೨ರಲ್ಲಿ ರಾಜ್ಯ ಪ್ರಶಸ್ತಿಯನ್ನು ನೀಡಿತು.

ಕೊಂಡಜ್ಜಿಯವರು ಸ್ವಯಂ ಆಸಕ್ತಿಯಿಂದ ಸ್ಕೌಟ್ ಚಳುವಳಿಯಲ್ಲಿ ಭಾಗವಹಿಸಿದರು. ಸ್ಕೌಟ್ ಶಿಬಿರಾರ್ಥಿಗಳಿಗೆ ಸಹಾಯ ಸಹಕಾರ ನೀಡಿದರು. ೧೯೭೯ರಲ್ಲಿ "ಧನ ಸಂಗ್ರಹ ಚಳುವಳಿ"ಯನ್ನು ಆರಂಭಿಸಿದರು. ಬಡಮಕ್ಕಳಿಗೆ ಸ್ಕೌಟ್ ಸಮವಸ್ತ್ರಗಳನ್ನು ದಾನ ಮಾಡಿದರು. ಸ್ಕೌಟ್ ಸದುದ್ದೇಶಕ್ಕಾಗಿ ದುಡಿದ ಕೊಂಡಜ್ಜಿಯವರು ವಿದೇಶ ಯಾತ್ರೆಗಳಲ್ಲಿ ಭಾಗವಹಿಸಿದರು." ೧೯೫೧ರಲ್ಲಿ ಆಸ್ಟ್ರಿಯ ದೇಶದ ಸಾಲ್ಸ್‌ಬರ್ಗ್‌ನಲ್ಲಿ ೭ನೇಯ ವಿಶ್ವ ಜಾಂಬೂರಿ ನಡೆದಾಗ ಭಾರತದ ಪ್ರತಿನಿಧಿಯಾಗಿ ಹೋಗಿದ್ದರು. ದಕ್ಷಿಣ ಆಫ್ರಿಕಾ ದೇಶದ ನೈರೋಬಿಯಲ್ಲಿ ೧೯೭೩ರಲ್ಲಿ ೨೪ನೆಯ ಅಂತರಾಷ್ಟ್ರೀಯ ಸ್ಕೌಟ್ ಸಮಾವೇಶ ಜರುಗಿತು ನಮ್ಮ ರಾಷ್ಟ್ರದ ಗಣ್ಯ ಪ್ರತಿನಿಧಿಯಾಗಿ ಕೊಂಡಜ್ಜಿಯವರು ಪಾಲ್ಗೊಂಡಿದ್ದರು.[೧೯] ಸ್ಕೌಟ್ ಮತ್ತು ಗೈಡ್ಸ್ ಸೇವೆಯಿಂದ ಜಾಗತಿಕ ಮಟ್ಟದಲ್ಲಿ ಕೊಂಡಜ್ಜಿಯವರ ವ್ಯಕ್ತಿತ್ವವನ್ನು ಗುರುತಿಸಿತು.

ಕೊಂಡಜ್ಜಿಯವರು ಸ್ಕೌಟ್ ಮತ್ತು ಗೈಡ್ಸ್ ಧ್ಯೇಯೋದ್ದೇಶ ಸಾಧನೆಗೆ "ಕೊಂಡಜ್ಜಿ ಗ್ರಾಮ"ವನ್ನು ಆಯ್ಕೆ ಮಾಡಿಕೊಂಡರು. ಕೊಂಡಜ್ಜಿ ಗ್ರಾಮದ ಕೆರೆಯ ಪಕ್ಕದಲ್ಲಿರುವ ಸರ್ಕಾರಿ ಜಮೀನು ಸೂಕ್ತ ಸ್ಥಳ ಎಂದು ಗುರುತಿಸಿದರು. ಆ ನೂರು ಎಕರೆ ಭೂಮಿಯನ್ನು ಸರ್ಕಾರದಿಂದ ಪಡೆದರು. ಶಿಬಿರಾರ್ಥಿಗಳಿಗೆ ಯೋಗ್ಯ ಸ್ಥಳವನ್ನಾಗಿ ರೂಪಿಸಲು ಶ್ರೀಮಂತ ದಾನಿಗಳ ಮನ ಒಲಿಸಿ, ಕಲ್ಪಿಸಿಕೊಂಡ ಆಕೃತಿಯಲ್ಲಿಯೇ ಸ್ಕೌಟ್ ಕ್ಯಾಂಪನ್ನು ನಿರ್ಮಿಸಿದರು.

ಕೊಂಡಜ್ಜಿ ಗ್ರಾಮದಲ್ಲಿ ಅಷ್ಟೇ ಅಲ್ಲದೆ ಚಿತ್ರದುರ್ಗ ನಗರದ ಮಧ್ಯೆ ಸ್ಕೌಟ್ ಕೇಂದ್ರ ಕಟ್ಟಿಸಲು ಸಹಾಯ, ಸಹಕಾರ, ಮಾರ್ಗೋಪಾಯಗಳನ್ನು ನೀಡಿದರು. ಹೀಗೆ ಸಮಾಜ ಮತ್ತು ಸ್ಕೌಟ್ ಸೇವೆಗೈದ ಕೊಂಡಜ್ಜಿಯವರು ರಾಷ್ಟ್ರ ರಾಜಕಾರಣದಲ್ಲಿ ಸೇವೆಗೈಯುವ ಸುವರ್ಣಾವಕಾಶ ದೊರೆಕಿತು.

ಜನಪ್ರಿಯಗೊಂಡ ಕೊಂಡಜ್ಜಿಯವರು ಇಂದಿರಾ ಕಾಂಗ್ರೆಸ್ ಪಕ್ಷ ಸೇರಿದರು. ಚಿತ್ರದುರ್ಗ "ಲೋಕ ಸಭಾಮತ ಕ್ಷೇತ್ರ"ದಿಂದ ಸ್ಪರ್ಧಿಸಿ ೧೯೭೨ರಲ್ಲಿ ಗೆದ್ದರು. ದೆಹಲಿಯಲ್ಲಿ "ಕೇಂದ್ರ ಆರೋಗ್ಯ ಮತ್ತು ಕುಟುಂಬ ಯೋಜನಾ ಖಾತೆ"ಯ ಉಪ ಸಚಿವರಾದರು. ಆದರೆ ರಾಜಕೀಯ ಹುನ್ನಾರುಗಳಿಂದ ೧೯೭೪ ಅಕ್ಟೋಬರನಲ್ಲಿ ಮಂತ್ರಿ ಪದವಿಗೆ ವಿದಾಯ ಹೇಳಿದರು. ನಿಷ್ಠಾವಂತ ವ್ಯಕ್ತಿಗಳು ಅಧಿಕಾರದಲ್ಲಿ ಇರಲು ಬಿಡುವುದಿಲ್ಲ. ಎಂಬುದಕ್ಕೆ ಕೊಂಡಜ್ಜಿಯವರೆ ನಿದರ್ಶನ.

ಕೊಂಡಜ್ಜಿಯವರು ಖಿನ್ನರಾಗದೆ ಇಂದಿರಾ ಕಾಂಗ್ರೆಸ್ ಪಕ್ಷವನ್ನು ತೊರೆದು ಜನತಾ ಪಕ್ಷವನ್ನು ಸೇರಿದರು "ಜಗ ಜೀವನರಾಂ ಬಹುಗುಣ" ಅವರ ಜನತಾ ಪಕ್ಷಕ್ಕೆ ಹೊಸ ಜೀವ ತುಂಬಿದರು. ೧೯೮೦ರ ಚುನಾವಣೆಯಲ್ಲಿ ಸ್ಪರ್ಧಿಸಿದರು. ಆದರೆ ಪೊಷ್ಟರು ಬ್ಯಾನರುಗಳಿಗೆ ಗತಿ ಇಲ್ಲದೆ ಸೋತರು. ರಾಜಕೀಯ ದರ್ಪ, ಅಧಿಕಾರದಿಂದ ಕೊಂಡಜ್ಜಿಯವರು ಸೋತು ಮಾನಸಿಕ ಅಸ್ವಸ್ಥರಾದರು. ಮನೆಯ ವೈಯಕ್ತಿಕ ತೊಂದರೆಗಳು ಅವರನ್ನು ಸಾಕಷ್ಟು ಕುಗ್ಗಿಸಿದವು. ಹಲವಾರು ಮಿತ್ರರು ಕೊಂಡಜ್ಜಿಯವರಿಂದ ದೂರ ಸರಿದರು.

ಮಾನಸಿಕ ವೇದನೆಯಲ್ಲಿ ಬಳಲಿದ ಕೊಂಡಜ್ಜಿಯವರು ಆರೋಗ್ಯದಲ್ಲಿ ಖಿನ್ನರಾಗಿ ದಾವಣಗೆರೆ ಆಸ್ಪತ್ರೆ ಸೇರಿದರು. ಆ ಸುದ್ದಿ ಚಿಗಟೇರಿಗೆ ತಲುಪಿತು. ಅಲ್ಲಿಗೆ ಹೋಗಿ ವಿಚಾರಿಸಿದಾಗ, ಕೊಂಡಜ್ಜಿಯವರು ಆರೋಗ್ಯ ಪರಿವೆ ಇಲ್ಲದೆ ಚಿಗಟೇರಿ ಗ್ರಾಮದ ಅಭಿವೃದ್ಧಿಯನ್ನು ಕುರಿತು ಪ್ರಶ್ನೆಗಳನ್ನು ಕೇಳುತ್ತಿದ್ದರು. ಸಾರ್ವಜನಿಕ ಹಿತಾಸಕ್ತಿ ಹೊಂದಿದ್ದ ಕೊಂಡಜ್ಜಿಯವರು, ಭ್ರಾತೃ ವಾತ್ಸಲ್ಯದಿಂದ ಸಂಗಣ್ಣನವರನ್ನು ಕಾಣುತ್ತಿದ್ದರು. ಆಪ್ತಭಾವದ ಒಡನಾಟ, ಚಿಗಟೇರಿಯ ಕಾಳಜಿಯನ್ನು ಅಭಿವ್ಯಕ್ತ ಪಡಿಸಲಾಗಿದೆ.

ಹೆಚ್ಚಿನ ಚಿಕಿತ್ಸೆಗಾಗಿ ಕೊಂಡಜ್ಜಿಯವರು ಬೆಂಗಳೂರಿಗೆ ಹೋಗಿದ್ದರು. ಅಲ್ಲಿಯೂ ಸಹ ಆರೋಗ್ಯ ದಿನ-ದಿನಕ್ಕೂ ಕ್ಷೀಣಿಸತೊಡಗಿತು ಮಾತನಾಡಲು ಆಗುತ್ತಿರಲಿಲ್ಲ. ಅಂತಹ ಪರಿಸ್ಥಿತಿಯಲ್ಲಿ ಚಿಗಟೇರಿಯ ಅಭಿವೃದ್ಧಿ ಕಾರ್ಯಗಳ ಬಗ್ಗೆ ಪ್ರಶ್ನೆಗಳ ಮಾಲಿಕೆಯನ್ನೆ ಬರೆದು ನನ್ನ ಕೈಗಿಟ್ಟರು ಎಂದು ಸಂಗಣ್ಣನವರು ಉಲ್ಲೇಖಿಸುತ್ತಾರೆ.

ಕೊಂಡಜ್ಜಿಯವರು ಹೃದ್ರೋಗದ ನರಗಳ ದೌರ್ಬಲ್ಯದಿಂದ ಆತ್ಮಸ್ಥೈರ್ಯವನ್ನು ಕಳೆದುಕೊಂಡರು. ೧೪-೧೧-೧೯೮೨ರಂದು ಹೃದಯ ಆಘಾತದಿಂದ ತನ್ನವರನ್ನು ತೊರೆದು, ಇಹದ ಬದುಕಿಗೆ ವಿದಾಯ ಹೇಳಿದರು. "ಬಸಪ್ಪನವರ ಮರಣ ವಾರ್ತೆಯನ್ನು ಬೆಂಗಳೂರು ಆಕಾಶವಾಣಿ ಅಂದೇ ಬಿತ್ತರಿಸಿತು. ಕೊಂಡಜ್ಜಿಯ ಸ್ಕೌಟ್ಸ್ ಮತ್ತು ಗೈಡ್ಸ್ ಕ್ಯಾಂಪಿನಲ್ಲಿ ಅವರ ಶವದ ಸಮಾಧಿ ಮಾಡಲಾಗುವುದನ್ನು ತಿಳಿಸಿತು."[೨೦] ಬೆಂಗಳೂರಿನ ಅವರ ಮನೆಯಲ್ಲಿ ಇರಿಸಿದ ಅವರ ಪಾರ್ಥಿವ ಶರೀರಕ್ಕೆ ಪಕ್ಷ ಭೇದವಿಲ್ಲದೆ, ಜೀವನದ ಎಲ್ಲ ರಂಗಗಳ ಜನರೂ ಗೌರವ ಸಲ್ಲಿಸಿದರು.

ಅಲಂಕೃತಗೊಂಡ ವಾಹನ ಕೊಂಡಜ್ಜಿಯವರ ಶವವನ್ನು ಹೊತ್ತು. ಗ್ರಾಮ ಪಟ್ಟಣವನ್ನು ದಾಟಿ ಬರುವಾಗ, ಜನರು ನಿಲ್ಲಿಸಿ ಅಂತಿಮ ನಮನವನ್ನು ಸಲ್ಲಿಸುತ್ತಿದ್ದರು. ಇದು ಕೊಂಡಜ್ಜಿ ಬಸಪ್ಪನವರ ಜನಪ್ರಿಯತೆಗೆ ಸಾಕ್ಷಿ. "ಹಳ್ಳಿ ಪಟ್ಟಣಗಳನ್ನು ಹಾಯ್ದುಕೊಂಡಜ್ಜಿಯ ಸ್ಕೌಟ್ ಕ್ಯಾಂಪಸ್ ತಲ್ಲುಪಿದ ಬಸಪ್ಪನವರ ಪಾರ್ಥಿವ ಶರೀರವನ್ನು ಸಮಾಧಿ ಮಾಡಿದಾಗ ೧೫-೧೧-೧೯೮೨ರ ಬೆಳಗಿನ ಜಾವ ಒಂದು ಗಂಟೆಯಾಗಿತ್ತು"[೨೧] ಆ ರಾತ್ರಿಯ ವೇಳೆಯಲ್ಲಿಯೂ ಸಾವಿರಾರು ಜನರು ನೆರೆದಿದ್ದರು.

ಕೊಂಡಜ್ಜಿಯವರ ಸಾತ್ವಿಕ ಬದುಕಿನ ಮೌಲ್ಯವನ್ನು ಗುರುತಿಸುವಲ್ಲಿ ಸಮಾಧಿ ಹತ್ತಿರ ನೆರೆದ ಜನಗಳೇ ಸಾಕ್ಷಿಯಾಗಿದ್ದರು. ಜನರ ಪ್ರೀತಿ ವಿಶ್ವಾಸವನ್ನು ಗಳಿಸಿದ್ದರು ಎಂಬುದನ್ನು ತೋರಿಸುವಂತೆ ಕಾಣಿಸುತ್ತಿತ್ತು. ಸ್ಕೌಟ್ ಶಿಬಿರದ ಪ್ರಕೃತಿಯ ಮಧ್ಯೆ ಪ್ರಶಾಂತವಾಗಿ ಮಲಗಿದರು. ಕೊಂಡಜ್ಜಿ ಅವರ ನಿಧನ ನಂತರ ಶಿಬಿರಕ್ಕೆ 'ಶ್ರೀ ಕೊಂಡಜ್ಜಿ ಬಸಪ್ಪ ಸ್ಕೌಟ್ಸ್ ಮತ್ತು ಗೈಡ್ಸ್ ತರಬೇತಿ ಕೇಂದ್ರ'ವೆಂದು ನಾಮಕರಣ ಮಾಡಲಾಗಿದೆ. ಆ ಅವಿಸ್ಮರಣೀಯ ಚೇತನದ ಕಂಚಿನ ಪ್ರತಿಮೆಯನ್ನು ೯-೨-೧೯೯೦ರಂದು ಅವರ ಎಪ್ಪತ್ತುನಾಲ್ಕನೆಯ ಹುಟ್ಟುಹಬ್ಬದ ಆಚರಣೆಯ ಸವಿ ಪ್ರಸಂಗದಲ್ಲಿ ಅನಾವರಣಗೊಳಿಸಲಾಗಿದೆ."[೨೨]

ಸಾರ್ವಜನಿಕ ಸೇವೆಯ ಶಿಸ್ತಿನ ಸಿಪಾಯಿ ಕೊಂಡಜ್ಜಿಯವರು ಕೌಟುಂಬಿಕ ಜೀವನದ ಕಡೆಗೆ ಹೆಚ್ಚಿನ ಒಲವು ಇರಲಿಲ್ಲ. ಹೆಂಡತಿ ಸರ್ವಮಂಗಳಮ್ಮನವರೆ ಕುಟುಂಬವನ್ನು ನಿರ್ವಹಿಸಿದಳು. ತನ್ನ ಎಂಟುಜನ ಮಕ್ಕಳಿಗೆ ನೀತಿ ಬೋಧಿಸಿದಳು. ವಕಾಲತ್ತು, ರಾಜಕೀಯದ ಕಡೆಗೆ ಹೋಗದಂತೆ ಜವಾಬ್ದಾರಿ ವಹಿಸಿಕೊಂಡಳು. ಕೊಂಡಜ್ಜಿಯವರು ತನ್ನ ಎಂಟು ಜನ ಮಕ್ಕಳನ್ನು ಉನ್ನತ ಶಿಕ್ಷಣದ ವರೆಗೆ ಓಧಿಸಿದರು. ಅವರ ಅಭಿರುಚಿ, ಆಸಕ್ತಿ ಕ್ಷೇತ್ರಗಳಲ್ಲಿ ಕೃಷಿ ಮಾಡಲು ಬಿಟ್ಟರು.

ಕೊಂಡಜ್ಜಿಯವರು ಸಮಯ ಪರಿಪಾಲಕರಾಗಿದ್ದರು. ಹೇಳಿಕೆಯ ಮಾತನ್ನು ಕೇಳುವ, ಒಪ್ಪುವ ಗುಣವುಳ್ಳವರಾಗಿದ್ದರು. ಈ ಒಂದು ದೌರ್ಬಲ್ಯದಿಂದ ರಾಜಕೀಯ ಜೀವನ ಅಸ್ತವ್ಯಸ್ತಗೊಂಡಿತು. ಯಾವುದೇ ಜಾತಿ ತಾರತಮ್ಯವಿಲ್ಲದೆ ಬಡವರ ಶೋಷಿತ ವರ್ಗದ ಏಳ್ಗೆಗಾಗಿಯೇ ದುಡಿಯುತ್ತಿದ್ದರು. ಇವರು ತಮ್ಮ ಬದುಕಿನ ಬವಣೆಗಳನ್ನು ದಾಖಲೆಯಲ್ಲಿ ಇಡಲು ಹೋದವರಲ್ಲ. ನಮ್ಮ ದೇಶದಲ್ಲಿ ದುಡಿದ ಕೆಲಸ ಕಾರ್ಯಗಳೇ ಐತಿಹಾಸಿಕ ದಾಖಲೆಗಳಂತೆ ಶೋಭಿಸುತ್ತವೆ.

**ಕೊನೆ ಟಿಪ್ಪಣಿಗಳು**

೧. ವಿರೂಪಾಕ್ಷ ಗೌಡ. ಕೆ. ಮತ್ತು ಮುದೇನೂರು ಸಂಗಣ್ಣ, 'ಹಳ್ಳಿಯ ಪದಗಳು' (ಜನಪದ ಸಂಗ್ರಹ) ಪು-೧೨

೨. ಅದೇ, ಪು-೧೫

೩. ಅದೇ, ಪು-೧೭

೪. ಅದೇ, ಪು-೨೪

೫. ಅದೇ, ಪು–೩೬

೬. ಅದೇ, ಪು–೫೨

೭. ಅದೇ, ಪು–೬೦

೮. ಅದೇ, ಪು–೬೩

೯. ಮುದೇನೂರು ಸಂಗಣ್ಣ 'ಗೊಂದಲಿಗರ ದೇವೇಂದ್ರಪ್ಪನವರ ಆಟಗಳು, ಪು–೧೩

೧೦, ಅದೇ, ಪು–೮೧

೧೧. ಮುದೇನೂರು ಸಂಗಣ್ಣ (ಸಂ), 'ಗೊಂಬೀಗೌಡರ ಸೂತ್ರದ ಗೊಂಬೆ ಆಟಗಳು' ಪು–೫೯

೧೨. ಅದೇ, ಪು–೭೧

೧೩. ಅದೇ, ಪು–೧೧೪

೧೪. ಮುದೇನೂರು ಸಂಗಣ್ಣ, (ಲೇ), 'ಕೊಂಡಜ್ಜಿ ಬಸಪ್ಪ', ಪು–೧೦

೧೫. ಅದೇ, ಪು–೨೯

೧೬. ಅದೇ, ಪು–೩೮

೧೭. ಅದೇ, ಪು–೩೮

೧೮. ಅದೇ, ಪು–೫೮

೧೯. ಅದೇ, ಪು–೬೧

೨೦. ಅದೇ, ಪು–೯೩

೨೧. ಅದೇ, ಪು–೯೩

೨೨. ಅದೇ, ಪು–೬೭

# ಅಧ್ಯಾಯ-೪

# ಚಿಗಟೇರಿ ಪದಕೋಶ

ಮುದೇನೂರು ಸಂಗಣ್ಣನವರು ೧೯೯೭ರಲ್ಲಿ ಕ್ಷೇತ್ರಾನ್ವೇಷಣೆಯ ಮೂಲಕ ಸಂಗ್ರಹಿಸಿ. ಸಂಪಾದಿಸಿದ ಕೃತಿಯಾಗಿದೆ. ಇದೊಂದು 'ಚಿಗಟೇರಿ' ಗ್ರಾಮವನ್ನು ಕೇಂದ್ರಿಕರಿಸಿ ಸಂಗ್ರಹಿಸಿ ರಚಿಸಿದ ಪದಕೋಶವಾಗಿದೆ. ಚಿಗಟೇರಿ ಗ್ರಾಮವು ಹರಪನಹಳ್ಳಿ ತಾಲ್ಲೂಕಿಗೆ ಸೇರಿದ ಒಂದು ಪುಟ್ಟಹಳ್ಳಿ ಈ ಗ್ರಾಮವೇ "ಚಿಗಟೇರಿ ಪದಕೋಶ" ರಚನೆಗೆ ಆಕರ ವಸ್ತುವಾಗಿದೆ. ಸಂಗಣ್ಣನವರನ್ನು ಬಿಟ್ಟರೆ ಮತ್ತ್ಯಾರು ಗ್ರಾಮವನ್ನು ಆಧರಿಸಿ ನಿಘಂಟನ್ನು ರಚಿಸಿದ್ದು ಎಲ್ಲೂ ಕಾಣಿಸುವುದಿಲ್ಲ. ಹಾಗಾಗಿ ಸಂಗಣ್ಣನವರ ಆಸಕ್ತಿ. ಶ್ರದ್ಧೆ, ಶ್ರಮ, ಅಮೂಲಾಗ್ರವಾಗಿ ಈ ಕೃತಿಯಲ್ಲಿ ಹುದುಗಿ ಹೋಗಿದೆ.

ಸುಮಾರು ನಲವತ್ತೈದು ವರ್ಷಗಳ ಕಾಲ ಅಧ್ಯಯನ ಶೀಲರಾಗಿ ಕ್ಷೇತ್ರ ಕಾರ್ಯದಲ್ಲಿ ತೊಡಗಿಸಿಕೊಂಡು, ನಿಘಂಟು ಪದಕೋಶವನ್ನು ಸಂಗ್ರಹಿಸಿದ್ದಾರೆ. ಮುಂದೆ ಬರುವ ನಿಘಂಟು ಅಧ್ಯಯನಕಾರರಿಗೆ "ಚಿಗಟೇರಿ ಪದಕೋಶ" ಒಂದು ಮಾದರಿಯಾಗಿದೆ. ಇದನ್ನು ಓದುವ ವಿದ್ವಾಂಸರಿಗೆ ಸಹೃದಯರಿಗೆ ಉಪಯುಕ್ತವಾದ ಕೃತಿ ಎನಿಸಿದೆ. ಆಯಾ ಗ್ರಾಮ, ತಾಲ್ಲೂಕು, ಜಿಲ್ಲೆಯಂತಹ ಪರಿಸರ ಭಾಷೆಯಲ್ಲಿ ನಿಘಂಟನ್ನು ರಚಿಸಲು, ಸಹಾಯಕ ಮತ್ತು ಆಕರ ಗ್ರಂಥವಾಗಿದೆ. ಇಂಥ ಮಹತ್ವದ ಅಪರೂಪದ ಕೃತಿಯನ್ನು "ಉಡುಪಿಯ ಪ್ರಾದೇಶಿಕ ಜಾನಪದ ಅಧ್ಯಯನ ಕೇಂದ್ರದ ಮಾಲೆ"ಯಲ್ಲಿ ಸೇರಿಸಿಕೊಳ್ಳಲಾಗಿದೆ.

'ಚಿಗಟೇರಿ ಪದಕೋಶವು' ಆಡು ಭಾಷೆಯ ಪದಗಳನ್ನು ಕೇಂದ್ರೀಕರಿಸಿ ರಚಿತವಾಗಿದೆ. ಭಾಷೆಯು ನಿಂತ ನೀರಲ್ಲ ಸದಾ ಹರಿಯುತ್ತಿರುವ ನದಿ ಇದ್ದಂತೆ ಅಂದರೆ ಭಾಷೆಯು ನಿತ್ಯ ಪರಿವರ್ತನಶೀಲವಾದುದು. ಭಾಷಾ ನಿಘಂಟಿನಲ್ಲಿರುವ ಹಳೆಯ ಶಬ್ದ ರೂಪಗಳ ಬಳಕೆ ಹೆಚ್ಚಿದಂತೆ ಹೊಸ ಹೊಸ ಪದಗಳು ಭಾಷಾ ಕೋಶಕ್ಕೆ ಸೇರ್ಪಡೆಗೊಳ್ಳುತ್ತಿರುವುದು ಸಹಜ ಪ್ರಕ್ರಿಯೆಯಾಗಿದೆ. ಹಲವು ಭಾಷಾ ಕೋಶಗಳಲ್ಲಿ 'ಚಿಗಟೇರಿ ಪದಕೋಶವು' ಒಂದು.

ಈ ಪದಕೋಶವು ಶಿಷ್ಟ ಮತ್ತು ಗ್ರಾಂಥಿಕ ಪರಂಪರೆಯಲ್ಲಿಲ್ಲದ ಜನಪದರ ಆಡು ಮಾತಿನ ವಿಶಿಷ್ಟ ಪದಗಳ ಸಂಗ್ರಹವಾಗಿದೆ. ಈ ಪದಕೋಶದ ರಚನೆಗೆ ಸಂಗಣ್ಣನವರೆ ಒಂದು ಕಥೆಯನ್ನು ಹೆಣೆದಿದ್ದಾರೆ. "ಸುಮಾರು ಐವತ್ತೈದು ವರ್ಷಗಳ ಹಿಂದೆ, ಒಂದು ದಿನ ನಮ್ಮೂರ ೮೦-೮೫ರ ವಯಸ್ಸಿನ ದಿ। ಗುಡ್ಲಾನೂರ ಗೋಣೆಜ್ಜನ ಮಕ ಕಂಡಾಗ 'ಏನಜ್ಜ, ಎಲ್ಲಿ ಹೋಗಿದ್ದಿ?' ಎಂದು ಕೇಳಿದೆ

"ನಮ್ಮಾಕಿಗೆ ಈ ಸಾಲಿ ತರಾಕ" ಎಂದು ಬಗಲಲ್ಲಿಯ ರಾಂಪುರದ ಸೀರೆ ತೋರಿಸಿದ 'ಸಾಲಿ ಎಂದರೆ ಓದೋ ಸಾಲಿ ಎಂದು ಮಾತ್ರ ತಿಳಿದಿದ್ದ ನಾನು ನಿಬ್ಬೆರಗಾದೆ. "ಸಾಲಿ ಅಂದ್ರೆ ಸೀರಿ ಅಂತಾ ಅರ್ಥೇನು ಸಾರ್" ಎಂದು ನಮ್ಮ ಸಾಲಿ ಮೇಷ್ಟ್ರನ್ನ ಕೇಳಿದೆ, "ಅದೊಂದು ಅಚ್ಚಗನ್ನಡದ ಗ್ರಾಮ್ಯ ಶಬ್ದವಿರಬೌದು" ಎಂದರು. ಈ ಶಬ್ದ ನನ್ನ ಕುತೂಹಲ ಕೆರಳಿಸಿ ಆಡು ಮಾತುಗಳನ್ನು ಕಿವಿಗೊಟ್ಟು ಕೇಳುವಂತೆ ಮಾಡಿತು. ಆ ನಂತರ ನನ್ನ ಗಮನ ಸೆಳೆದ ಗಬಸ್ಥುಳಿ, ಗದ್ಮಿ, ಕಾಟುಗ, ಚಾವತ್ತು, ದಸಾರಿ, ನೆಲಹಡುಕ ಮುಂತಾದ ಎಷ್ಟೋ ಆಡುನುಡಿಗಳು ಕುತೂಹಲ ಕೆರಳಿಸಿದವು."[೧] ಇವು ನಿಘಂಟಿಗೆ ಹೋರತಾದ ಮತ್ತು ಗ್ರಂಥಸ್ಥವಲ್ಲದ ಈ ಶಬ್ದಗಳು ಸಂಗ್ರಹಿಸುವಲ್ಲಿ ಪ್ರೇರೆಪಣೆ ನೀಡಿದವು.

೧೯೫೮ರಲ್ಲಿ ಡಾ. ಶಿವರಾಮ ಕಾರಂತರು ಈ ಪದಕೋಶದ ಸಂಗ್ರಹಣೆಗೆ ಪ್ರೇರಕ ಶಕ್ತಿಯಾಗಿದ್ದರು. ಹೀಗೆ ಹಲವರ ಪ್ರೇರಣೆಯಿಂದ ಒಂಭತ್ತು ಸಾವಿರದಷ್ಟನ್ನು ಹೆಕ್ಕಿ ತೆಗೆದು ಈ "ಚಿಗಟೇರಿ ಪದಕೋಶ"ವನ್ನು ಸಂಪಾದಿಸಿದ್ದಾರೆ. ಈ ಪದಕೋಶದಲ್ಲಿ ಜನಪದರ ಆಡುನುಡಿಗಳು, ನುಡಿಗಟ್ಟುಗಳು, ಸಮಾನಾರ್ಥಕ ಪದಗಳು, ಅನ್ಯಾರ್ಥಗಳು, ಲಾಕ್ಷಣಿಕಾರ್ಥಗಳನ್ನು ಒಳಗೊಂಡು ರಚನೆಯಾಗಿವೆ.

ಜನಪದರು ಹೇಳುವ ನುಡಿಗಟ್ಟುಗಳು ವಿಭಿನ್ನವಾದ ಅರ್ಥವನ್ನು ಕೊಡುತ್ತವೆ. ಉದಾ:- "ತಟ್ಟಿ ಬಂಡಿ ಇಡು=ವಿಪರೀತ ಛೀಮಾರಿ ಹಾಕು"

"ತಿರುಗು ಹೊಡೆಸು = ೧. ವಾಂತಿ ಮಾಡಿಸು ೨. ಎದುರು ಬೀಳುವಂತೆ ಮಾಡು"

"ನೆಲ ಸಾಮು ಸೂರ = ಕೈಲಾಗದವ; ಹೇಡಿ"

"ಕಚ್ಚಿ ಉಚ್ಚಿಕೋ = ಭಯ ಭೀತನಾಗು"[೨]

ಇದೇ ರೀತಿ "ನಾಲಗಿ ಕಳಕೋ, ಅಡಕೀ ಕಡಿಯೋ ಹೊತ್ತು, ಓಳ್ತಾ ಅನ್ನು; ಟೆಂಕ ಹಾಕು, ಓಟು ಹಾರಿಸು, ಕಾಲು ಹಾಕು" ಮುಂತಾದ ನುಡಿಗಟ್ಟು ಪದಗಳನ್ನು ಈ ಕೋಶದಲ್ಲಿ ಕಾಣುತ್ತೇವೆ.ನಮ್ಮ ದೇಶ ಕೃಷಿ ಪ್ರಧಾನವಾದದ್ದು, ಅದರಲ್ಲೂ ಗ್ರಾಮೀಣ ಪ್ರದೇಶವೆ ಹೆಚ್ಚು ಕೃಷಿಯನ್ನು ಅವಲಂಬಿಸಿದೆ. ಚಿಗಟೇರಿ ಗ್ರಾಮವು ಕೃಷಿ ವೃತ್ತಿ ಜೀವನವನ್ನು ಆಧರಿಸಿದೆ. ವೃತ್ತಿಗೆ ಸಂಬಂಧಿಸಿದ ಆ ಗ್ರಾಮದ ಪಾರಿಭಾಷಿಕ ಪದಗಳನ್ನು ಸಂಗಣ್ಣನವರು ಸಂಗ್ರಹಿಸಿದ್ದಾರೆ. ವಿವಿಧ ತರಹದ ಕುಲ ಕಸುಬುಗಳಿಗೆ ಸಂಬಂಧಿಸಿದ ಪದಗಳ ಲಕ್ಷಣಗಳನ್ನೊಳಗೊಂಡಿದೆ. "ಮುಖ್ಯವಾಗಿ ಸಸ್ಯಗಳು ಮೂಲಿಕೆಗಳು, ದೇಶೀ ವೈದ್ಯ, ಒಕ್ಕಲುತನ, ಕಮ್ಮಾರಿಕೆ, ಅಕ್ಕಸಾಲಿಗ, ಬಡಗಿತನ, ಚಮ್ಮಾರಿಕೆ, ಕುಂಬಾರಿಕೆ, ನೇಯ್ಗೆ ಮುಂತಾದ ಕುಲ ಕಸುಬು, ಕುಲಸಂಬಂಧೀ ಆಚರಣೆಗಳು, ಕಲಾ ಪ್ರಕಾರಗಳು ವಿನೋದ ಕ್ರೀಡೆಗಳು"[೩] ಮುಂತಾದ ವಿಚಾರಗಳನ್ನು ಸಮಗ್ರವಾಗಿ ಪರಿಚಯಿಸುತ್ತದೆ. ಆದ್ದರಿಂದ "ಜನಪದ ಸಂಸ್ಕೃತಿಯ ಕಿರುಕೋಶ"ವೆಂದು ಸಂಗಣ್ಣನವರೆ ಹೆಸರಿಸಿದ್ದಾರೆ.

ಅಕ್ಕಸಾಲಿಗರು ಮತ್ತು ಕಮ್ಮಾರರು ತಮ್ಮ ವೃತ್ತಿಯಲ್ಲಿ ಬಳಸುವ ಆಯುಧ ಈ ಪದ ಸಂಪತ್ತಿನಲ್ಲಿದೆ. ಉದಾಹರಣೆಗೆ "ಅಂಗಸ-ಅಂಕುಶ, ಅಕ್ಕಸಾಲಿಗರು, ಕಮ್ಮಾರರು ಬಳಸುವ ಒಂದು ಪ್ರಕಾರದ ಇಕ್ಕುಳ"[೪]

ಮನುಷ್ಯ, ಪ್ರಾಣಿ, ಪಕ್ಷಿ, ಎತ್ತು, ಎಮ್ಮೆ, ಗಿಡ, ಬಳ್ಳಿ, ಸಸ್ಯ ಮತ್ತು ಕೃಷಿಕನು ಹೊಲದಲ್ಲಿ ಬೆಳೆದ ಬೆಳೆಗಳಿಗೆ ತಗಲುವ ರೋಗಗಳ ಗುಣ ಲಕ್ಷಣದ ಪದಗಳನ್ನು ಈ ನಿಘಂಟಿನಲ್ಲಿ ಕಾಣುತ್ತೇವೆ. ಉದಾ:– "ಅಂಟು ಸೋರು ಒರಗು ರೋಗ, ಉರಿಗಂಟು, ಉರುಕಜ್ಜಿ, ಅಂಗಳುಗುಪ್ಪಿ, ತಿರುಗಣಿ ರೋಗ, ಮೈಲಿಹಾಕಿಸು, ಸಂದು ಮಕ್ಕಳಿಗೆ ಬರುವ ರೋಗ, ಉಚ್ಚು ರೋಗ, ಸಪ್ಪೆರೋಗ, ಕಟಗರೋಣಿ, ಬಿಲ್ಲೀಹುಳ" ಮುಂತಾದ ಕಾಯಿಲೆಗೆ ಸಂಬಂಧಿಸಿದ ಪದಗಳನ್ನು ಈ ಪದಕೋಶದಲ್ಲಿ ಕಾಣುತ್ತೇವೆ.

ಸಸ್ಯಜಾತಿಯಂತಹ ಸೊಪ್ಪುವಿಗೆ ಸಂಬಂಧಿಸಿದ ಸಾರು, ಪಲ್ಯ ಮತ್ತು ಔಷಧಿಗಳಿಗೆ ಉಪಯೋಗಿಸುವ ಪದಗಳ ರಚನೆ ಈ ಕೋಶದಲ್ಲಿ ಇವೆ. ಉದಾ:– "ಅನುಕುನಾಕರಿ" (ಹೊನಗನಿ), "ಕಲಗಾಣಿ", "ಆಲಿಸಪ್ಪು", "ಉತ್ರಾಣಿ", "ಬಳಿವಡಕ", "ಬಳ್ಳಿಸೊಪ್ಪು" ಮುಂತಾದ ವಿವಿಧ ಜಾತಿಯ ಸೊಪ್ಪನ್ನು ಜನಪದರು ತರಕಾರಿಯಾಗಿ, ಔಷಧಿಯಾಗಿ ಉಪಯೋಗಿಸುತ್ತಾರೆ. ಜನಪದರಿಗೆ ಇರುವ ವೈದ್ಯಕೀಯ ಕ್ಷೇತ್ರದ ಅರಿವನ್ನು ಈ ಪದಕೋಶವು ತಿಳಿಸುತ್ತದೆ.

ವಿವಿಧ ರೀತಿಯ "ಮಳೆ" ಪ್ರಮಾಣದ ವೈಶಿಷ್ಟ್ಯತೆಯನ್ನು ಈ ಪದಕೋಶವು ಕಟ್ಟಿ ಕೊಡುತ್ತದೆ. ಉದಾಹರಣೆಗೆ:– "ಅಂಟು ಮಳೆ, ಜಿಟಿಜಿಟಿ ಮಳೆ, ಅಕಾಲಮಳೆ, ಆಡುಹನಿ, ಜಿನುಗು ಮಳೆ, ಪಿಸಿಮಳೆ, ಗುಂಜುಮಳೆ, ಕಾಲಂಟು ಮಳೆ, ವಲ್ಲಿ ತೊಯ್ಯುವ ಮಳೆ, ಕಂಬ್ಳಿ ಜಡವು ಮಳೆ, ಹಸಿಮಳೆ, ಮಿಂಚು ನೀರಿನ ಮಳೆ, ನೀರು ಗುಂಪಾಡುವ ಮಳೆ, ಎಂಡಿ ಕರಗೋ ಮಳೆ, ಒಡ್ಡಿಗೆ ನೀರು ಬರೋ ಮಳೆ, ಕಾರು ಮಳೆ, ದೆವ್ವ ಮಳೆ, ಕೇಡು ಮಳೆ, ಅಡ್ಡಮಳೆ" ಮುಂತಾದ ಪದಗಳ ಮಹತ್ವವನ್ನು ಈ ನಿಘಂಟು ಕಟ್ಟಿ ಕೊಡುತ್ತದೆ.

ಈ ಪದಕೋಶದಲ್ಲಿ "ಗೌರವ ಸೂಚಕ ಪದಗಳನ್ನು ಕಾಣುತ್ತೇವೆ.

ಉದಾ:– ೧. "ಅನೀಕ, ಅಹ್ನಿಕ, ವೀರಶೈವ ಪೀಠಾದಿ ಪತಿಗಳು ಸ್ನಾನಕ್ಕೆ ಹೇಳುವ ಗೌರವ ಶಬ್ದ"[೫]

೨. "ಎಬೇ ಅಬ್ಬೆ ವಯಸ್ಸಾದ ಮಹಿಳೆಯರನ್ನು ಕರೆವ ಗೌರವ ಸೂಚಕ ಶಬ್ದ"[೬]

೩. "ಬಾಯಿ ಮೇಲ್ವರ್ಗದ ಮಹಿಳೆಯರನ್ನು ಸಂಬೋಧಿಸುವ ಗೌರವ ವಾಚಕ ನುಡಿ"[೭]

೪. ಇಕೇ ಇವಳೇ ಪ್ರೀತಿಯಿಂದ ಓರಗೆಯ ಗೆಳತಿಯರು ಕರೆಯುವ ಸಂಬೋಧನಾ ಪದ"[೮].

ಈ ಮೇಲಿನ ಪದಗಳನ್ನು ಗ್ರಾಮೀಣ ಜನಪದರ ಗೌರವಾನ್ವಿತ ವ್ಯಕ್ತಿಗಳ ಮೌಲ್ಯವನ್ನು ಹೆಚ್ಚಿಸುತ್ತದೆ. ಗ್ರಾಮೀಣ ಜನರ ಪ್ರೀತಿ ವಿಶ್ವಾಸಗಳಿಸುವ, ಹಿರಿಯ–ಕಿರಿಯರನ್ನು ಗೌರವಿಸುವ, ತಂದೆ–ತಾಯಿ ಹೇಳಿದಂತೆ ನಡೆಯುವ, ಅಕ್ಕ–ತಂಗಿ, ಅಣ್ಣ–ತಮ್ಮ ಎಂಬ ಸಂಬಂಧಗಳನ್ನು ಅರಿಯುವ, ದೊಡ್ಡವರು ಚಿಕ್ಕವರನ್ನು ಆಶೀರ್ವಧಿಸುವಂತಹ ಮಹತ್ವದ ಪದಗಳನ್ನು ಅರಿತುಕೊಳ್ಳಲಾಗಿದೆ.

ಗ್ರಾಮೀಣ ಪ್ರದೇಶದಲ್ಲಿ ಆಚರಣೆ, ಮದುವೆ ಸಮಾರಂಭಗಳ ಸಂದರ್ಭದಲ್ಲಿ ಬಳಸುವ ಪದಗಳನ್ನು ಈ ಕೋಶದಲ್ಲಿ ಕಾಣುತ್ತೇವೆ. ಉದಾ:– "ಅರಿಷ್ಣ ಪತ್ಲ, ಅರಿಷ್ಣ ಪಂಜಿ, ಅರಿಷ್ಣ ಮೈ" ಮುಂತಾದವುಗಳು.

ಗ್ರಾಮೀಣ ಜನರು ದೇವರಿಗೆ ಸಲ್ಲಿಸುವ ಆಚರಣೆಯ ವಿಧಿ ವಿಧಾನಗಳಿಗೆ ಬಳಸುವ ಪದಗಳನ್ನು ಈ ಕೋಶದಲ್ಲಿ ಕಾಣುತ್ತೇವೆ. ಉದಾ:– ಉಟಗಿ, ಸಿರಸ್ ಪವಾಡ, ಅಂಬ್ಲಿ ಬಂಡಿ, ಅಗ್ನಿ ಕುಂಡ" ಮುಂತಾದವುಗಳು ದೇವರಿಗೆ ಸಂಬಂಧಿಸಿದ ಆಚರಣೆಗಳಾಗಿವೆ.

ಈ ಪದಕೋಶದಲ್ಲಿ ಜಾತಿ ಮತ್ತು ವರ್ಗದ ಬೆಡಗುಗಳ ಕುರಿತು ಪದಗಳ ಉಲ್ಲೇಖವನ್ನು ಕಾಣುತ್ತೇವೆ. ಉದಾ:– ೧. ಕುರಬ ಜನಾಂಗದ ಬೆಡಗುಗಳು, "ಉಲ್ಲೇನೂರು, ಉಣ್ಣೆಗಂಕಣ, ಕಳ್ಳ ಗೋಣೇರು, ಕಾಲಿನೋರು, ಗೌಡನೋರು, ಬನ್ನಿ ನೋರು, ಬಿಜಲರು, ಹತ್ತಿಕಂಕಣ" ಮುಂತಾದವುಗಳು. ೨. ಪರಿಶಿಷ್ಟ ಪಂಗಡಗಳಲ್ಲೊಂದಾದ ಚಲುವಾದಿ ಕೋಮಿನ ಬೆಡಗುಗಳಿಗೆ ಸಂಬಂಧಿಸಿದ ಪದಗಳು ಈ ಕೋಶದಲ್ಲಿವೆ. ಉದಾ:– "ಕೋರೆಲ್ಯಾರು, ಕಸ್ತೂರ್‍ಯಾರು, ಜಡಗಲರು, ಪೆದ್ದಡ್ಡೇರು, ಬಂಟ್ಲಾರು, ಬಂಡೆರ್‍ಯಾರು, ಮಳಿಲ್ಯಾರು, ಬುಟುಕ್ಲಾರು, ಮುದುಗೊಂಡ್ಲಾರು, ರಣಗೊಬ್ಬೇರು" ಮುಂತಾದ ಬೆಡಗುಗಳಿಗೆ ಸಂಬಂಧಿಸಿದ ವಿವಿಧ ಜಾತಿಯ ಪದಗಳು ಈ ನಿಘಂಟಿನಲ್ಲಿ ಇವೆ.

ಗಾದೆಗಳು, ಮಕ್ಕಳಾಡುವ ಆಟಗಳು ಮತ್ತು ಬಾಲ ಭಾಷೆಯ ಪದಗಳನ್ನು ಕಾಣುತ್ತೇವೆ. ಉದಾ:– "ಕುತ್ತತಿಬಾನ, ಲಡ್ಡು ಲಡ್ಡು ತಿಮ್ಮಣ್ಣ ಇವು ಮಕ್ಕಳಾಡುವ ಆಟಗಳಾಗಿವೆ. "ಜೇಜಿ" ದೇವರು ಬಾಲ ಭಾಷೆಯ ಪದವಾಗಿದೆ. "ಗಬಿ ಬಿಸಿ, ತಂಗಲು ಹರಿಕಿ, ತಡೀಲಾರದವ, ಪಡಿಯಾಡು, ಬಡವನ ಸಿಟ್ಟು" ಮುಂತಾದ ಗಾದೆ ಪದಗಳು ಈ ಕೋಶದಲ್ಲಿವೆ.

ಶುಭ–ಅಶುಭಗಳ ನಡುವೆ ಇರುವ ಜನಪದರ ನಂಬಿಕೆಗಳನ್ನು ಕುರಿತು ಪದಗಳು ಈ ಪದಕೋಶದಲ್ಲಿ ಸಂಗ್ರಹಿಸಲಾಗಿದೆ. ಉದಾ:– "ಛತ್ರಿ ಸುಳಿ, ಅಂಗ, ಅಡಕಲಿಸುಳಿ, ಮುಂತಾದ ನಂಬಿಕೆಗಳನ್ನು ಪರಿಚಯಿಸಲಾಗಿದೆ.

ಗ್ರಾಮೀಣ ಪ್ರದೇಶದಲ್ಲಿ ಜನರು ಜೋಳ, ರಾಗಿ, ನವಣೆ, ಸಜ್ಜೆ ಮುಂತಾದವುಗಳನ್ನು ಅಳೆಯುವ ಮಾಪನ ಸಾಮಾಗ್ರಿ ಕುರಿತು ಪದಗಳನ್ನು ಪರಿಚಯಿಸಲಾಗಿದೆ. ಉದಾ:–

೧. "ಅರ್ಪಾವು, ಸೇರಿನ ಅಳತೆಯ ಒಂದನೇ ಎಂಟು ಅಂಶ"[೯]

೨. "ಗುದ್ದು, ಮೊಳಕೈ ಕೀಲಿನಿಂದ ಮುಷ್ಠಿಯವರೆಗಿನ ಅಳತೆ"[೧೦]

೩. "ಗೋಪಾಳ ಪುಟ್ಟಿ, ಗುಲಪುಟ್ಟಿ ಬೋರೆ, ಕವಳಿ, ಬಿಕ್ಕೆಹಣ್ಣು ಮಾರುವವರು ಧಾನ್ಯ ಅಳೆಯಲು ಬಳಸುವ ಸಣ್ಣ ಬುಟ್ಟಿ"[೧೧] ಹೀಗೆ "ತಸಾರ, ನಗ ನಲವತ್ತೆರಡು ಮಣಗಳ ತೂಕ, ಮತ್ತು ನೋಟಾಕು ಇಂತಹ ಪದಗಳು ಅಳತೆಯ ವಿವರವನ್ನು ಈ ಪದ ಕೋಶದಲ್ಲಿ ಅರಿತುಕೊಳ್ಳಲಾಗಿದೆ.

ಕನ್ನಡ ಭಾಷೆ ತನ್ನ ಬಾಂಧವ್ಯದ ಒಡನಾಟಕ್ಕಾಗಿ ಅನ್ಯಭಾಷೆಯಂತಹ ಉಪಭಾಷೆಗಳ ಪದಗಳನ್ನು ಸ್ವೀಕರಿಸಿದೆ. ಉದಾ:– "ಜಸ್, ಜಾಂಡ್ಯ, ಜಾಕ್‌ಎತ್ತು, ಟಚ್ ಮಾಡು, ಟಣಕಿ, ಟಾಪು, ಡೂಟಿಮಂದಿ, ಡೌನು, ಪರಮೆಂಟು" ಮುಂತಾದಗಳನ್ನು ತಿಳಿದುಕೊಳ್ಳಲಾಗಿದೆ.

ಈ ಪದಕೋಶದಲ್ಲಿ ನಿಘಂಟಿಗೆ ಹೊರತಾದ ಪದಗಳ ಉಲ್ಲೇಖಗಳಿವೆ. ಆದರೆ ಅವು ಅರ್ಥಪೂರ್ಣವಾದ ನಿಘಂಟಿಮಗಳು ಉದಾ:–

೧. "ಬೆವರು = ಕುರಿಯ ವೀರ್ಯ" (ಟಗರಿನ ವೀರ್ಯ)

೨. ಮಂಚ = ದೊಡ್ಡಸ್ತಿಕೆ ಸಂಕೇತ

೩. ಮೋಕ್ಷ = ೧. ಹೊಡೆತ ೨. ನಿಂದನೆ"೧೨

ಚಿಗಟೇರಿ ಪದಕೋಶದಲ್ಲಿ 'ಅ' ಕಾರದಿಂದ ಇಡಿದು 'ಳ' ಕಾರದ ವರೆಗಿನ ಆಡು ಭಾಷೆಯ ಪದಗಳನ್ನು ಸಮಗ್ರವಾಗಿ ಸಂಗ್ರಹಿಸಲಾಗಿದೆ. ಕಿಟ್ಟೆಲ್ ಕೋಶದಲ್ಲಿಲ್ಲದ ಪದಗಳನ್ನು ಸಂಗ್ರಹಿಸಲಾಗಿದೆ. ಸಂಗಣ್ಣನವರು ಕೂಡಿಟ್ಟ ಪ್ರಾದೇಶಿಕ ಆಡುನುಡಿಗಳಲ್ಲಿ ಒಂಭತ್ತು ಸಾವಿರದಷ್ಟನ್ನು ಹೆಕ್ಕಿ ತೆಗೆದು "ಈ ಚಿಗಟೇರಿ ಪದಕೋಶವನ್ನು ಸಿದ್ಧ ಪಡಿಸಿದ್ದಾರೆ. ಸಾಮಾಜಿಕ, ಸಾಂಸ್ಕೃತಿಕ, ಧಾರ್ಮಿಕ ಹಾಗೂ ವೈಜ್ಞಾನಿಕ ಅಂಶಗಳನ್ನು ತಿಳಿಸುವ ವೈಶಿಷ್ಠ ಪೂರ್ಣವಾದ ಪದಗಳ ಸಂಗ್ರಹವಾಗಿದೆ. ಪರಂಪರಾನುಗತವಾದ ಪ್ರಾದೇಶಿಕ ಆಡುಭಾಷೆಯ ಪದಗಳ ಜೊತೆಗೆ ಉಪಭಾಷಾ ಪದಗಳನ್ನೊಳಗೊಂಡು ರಚಿತವಾಗಿದೆ. ಜನಪದರ ಸಾಂಸ್ಕೃತಿಕ ವೈವಿಧ್ಯತೆಯ ಜೀವನ, ವೃತ್ತಿ, ಒಡನಾಟ, ಸಂಬಂಧ, ಜಾತ್ಯಾತೀತ ಮನೋಭಾವನೆಯಂತಹ ರೂಪುರೇಷಗಳನ್ನು ಕುರಿತು ಮೌಲ್ಯಿಕವಾದ ಉಪಯುಕ್ತ ಪದಗಳನ್ನು ವಿವರಿಸುತ್ತವೆ. ಅಲ್ಲದೆ ಪ್ರಾದೇಶಿಕ "ಅಚ್ಚಗನ್ನಡದ ಗ್ರಾಮ್ಯ ಶಬ್ದಗಳ" ರಚನೆಯನ್ನು ಈ ಪದಕೋಶದಲ್ಲಿರುವುದನ್ನು ಕಾಣುತ್ತೇವೆ. ಆದುದರಿಂದ ನಿಘಂಟು ಶಬ್ದಶಾಸ್ತ್ರದ ಒಂದು ಅಂಗವೇ ಆಗಿದೆ. ಜನ ಸಮುದಾಯದಲ್ಲಿರುವ ಜೀವಂತ ಪದಗಳ ಬಳಕೆಯನ್ನು ಅದರ ಸಂದರ್ಭ ಮತ್ತು ಕ್ರಿಯಾರೂಪದಲ್ಲಿ ದಾಖಲಿಸಿರುವುದು ಚಿಗಟೇರಿ ಸಾಂಸ್ಕೃತಿಕ ಪದಕೋಶದ ವಿಶೇಷತೆಯಾಗಿದೆ.

**ಕೊನೆ ಟಿಪ್ಪಣಿಗಳು**

೧. ಮುದೇನೂರು ಸಂಗಣ್ಣ, (ಸಂ) 'ಚಿಗಟೇರಿ ಪದಕೋಶ', ಪು. ಅರಿಕೆಯಿಂದ

೨. ಅದೇ, ಪು–೨

೩. ಅದೇ, ಪೀಠಿಕೆ–xii

೪. ಅದೇ, ಪು–೧

೫. ಅದೇ, ಪು–೮

೬. ಅದೇ, ಪು–೨೬

೭. ಅದೇ, ಪು–೧೪೪

೮. ಅದೇ ಪು–೧೬

ಅಧ್ಯಾಯ–೫

# ಸಮಾರೋಪ

ಮುದೇನೂರು ಸಂಗಣ್ಣನವರು ಗಂಭೀರ ಸಂಸ್ಕೃತಿ ಚಿಂತಕರಾಗಿದ್ದಾರೆ. ಕೃಷಿಕ ಮನೆತನದಲ್ಲಿ ಹುಟ್ಟಿ ಸಿರಿವಂತಿಕೆಯಲ್ಲಿ ಬೆಳೆದವರು. ಇವರು ಪ್ರಾಥಮಿಕ ಶಾಲಾ ಹಂತದಲ್ಲಿಯೇ ಕವಿತೆಗಳನ್ನು ರಚಿಸುತ್ತಿದ್ದರು. ಪ್ರೌಢಶಾಲಾ ಹಂತದಲ್ಲಿ "ಕರ್ನಾಟಕ ಏಕೀಕರಣ" ಕುರಿತು ಭಾಷಣ ಮಾಡಿ ಗುರುಗಳಿಂದ ಭೇಷ್ ಎನಿಸಿಕೊಂಡವರು. ಮುಗ್ಧ ಸ್ವಭಾವ ಹೊಂದಿದ ಸಂಗಣ್ಣನವರು ಕವಿತೆಗಳನ್ನು ಬರೆದು ಶಾಲೆಯಲ್ಲಿ ವಾಚನ ಮಾಡುತ್ತಿದ್ದರು. 'ಇಂಟರ್ ಮೀಡಿಯೇಟ್' ಓದುವಾಗ ಬಂಗಾಳಿ, ತೆಲುಗು, ಮರಾಠಿ, ಹಿಂದಿ ಭಾಷೆಗಳನ್ನು ಕಲಿತರು ನಂತರ ಸಂಸಾರಿಕ ಜೀವನಕ್ಕೆ ಕಾಲಿರಿಸಿದರು. ಇಡೀ ಮನೆತನದ ಜವಾಬ್ದಾರಿ ಹೊತ್ತು, ಏಳುನೂರು ಎಕರೆಯ 'ಭೂ ಒಡೆಯನಾಗಿ ಚಿಗಟೇರಿ" ಗ್ರಾಮದಲ್ಲಿ ಜೀವನ ಸಾಗಿಸಿದರು. ಅವರು ಜಮೀನುದಾರರಾಗದೆ ಜನರ ಕಷ್ಟಗಳಿಗೆ ಸ್ಪಂಧಿಸುವ ಕಾಳಜಿಯುಳ್ಳವರಾಗಿದ್ದರು.

ಚಿಗಟೇರಿ ಗ್ರಾಮದಲ್ಲಿ ರೈತರ ಮೇಲೆ ನಡೆಯುವ ದಲ್ಲಾಳಿಗಳ ದಬ್ಬಾಳಿಕೆ ಕಂಡು ಅದನ್ನು ತೊಲಗಿಸಿ, ರೈತರಿಗೆ ನ್ಯಾಯ ಸಿಗುವಂತೆ, "ಹೊಗೆ ಸೊಪ್ಪಿನ ದಲ್ಲಾಳಿ ಅಂಗಡಿ"ಯನ್ನು ತೆರೆದರು. ಹೊಗೆ ಸೊಪ್ಪಿನ ವ್ಯಾಪಾರಿಯಾದ ಸಂಗಣ್ಣನವರು ಆಂಧ್ರ, ಮಹಾರಾಷ್ಟ್ರ, ನಿಪ್ಪಾಣಿ, ಹೈದ್ರಾಬಾದ್ ಮುಂತಾದ ಹೊರ ರಾಜ್ಯಗಳಲ್ಲಿ ತನ್ನ ವ್ಯಾಪಾರ ವಹಿವಾಟ ಸಂಪರ್ಕವನ್ನು ಬೆಳೆಸಿಕೊಂಡರು. ವ್ಯಾಪಾರ ಮತ್ತು ಹೊರ ರಾಜ್ಯಗಳ ದಲ್ಲಾಳಿಗಳ ಸಂಪರ್ಕದಿಂದ ಸಾಹಿತ್ಯದ ಕಡೆಗೆ ಹೆಚ್ಚಿನ ಒಲವು ತೋರಿಸಿದರು. ಅದರ ಪರಿಣಾಮವಾಗಿ ದೀಪಾವಳಿಯಂತಹ ಹಬ್ಬಗಳಲ್ಲಿ ಸಾರ್ವಜನಿಕರು ತಮ್ಮ ಅಂಗಡಿಗಳನ್ನು ಪೂಜೆಯ ಮೂಲಕ ಆಚರಿಸಿದರೆ, ಸಂಗಣ್ಣನವರು ಸಾಂಸ್ಕೃತಿಕ ಕಾರ್ಯಕ್ರಮಗಳನ್ನು ಏರ್ಪಡಿಸುವುದರ ಮೂಲಕ ಸಾಹಿತ್ಯದ ರಸವನ್ನು ಉಣಬಡಿಸುತ್ತಿದ್ದರು. ಒಬ್ಬ ವ್ಯಾಪಾರಿಯಾದರ ಜಾನಪದ ಸಾಹಿತ್ಯ ಸಂಸ್ಕೃತಿ ಸಂಗಣ್ಣನವರನ್ನು ಆಕರ್ಷಿಸಿತು. ರಾಜಕೀಯದಲ್ಲಿ ಸೋಲನುಂಡು, ಸಮಾಜ ಸೇವೆಗೈಯುತ್ತಾ ಜಾನಪದ ಕೃತಿಗಳನ್ನು ಸಂಗ್ರಹಿಸಿದರು. ಜನಪದರ ಜೀವನವನ್ನು ವಿವಿಧ ಆಯಾಮಗಳಲ್ಲಿ ಗ್ರಹಿಸಿಕೊಂಡು, ದೇಶಿಯ ನೆಲೆಯಲ್ಲಿಯೇ ಕೃತಿಗಳನ್ನು ಸಂಪಾದಿಸಿದರು.

ಪರಂಪರಾನುಗತ ವೃತ್ತಿ ಕಲಾವಿದರ ಪ್ರತಿಭೆಗಳನ್ನು ಗುರುತಿಸಿ ಅವರಿಗೆ ಒಂದು ವೇದಿಕೆಯ ಚೌಕಟ್ಟನ್ನು ನಿರ್ಮಿಸಿಕೊಟ್ಟರು. ದಲಿತ ಅಥವಾ ದಮನಿತ ವರ್ಗದ, ವೃತ್ತಿ ಜೋಗಿಗಳ ಹಿಂದೆ

ಅಲೆದು ಹಲವು ಹಾಡು ಮತ್ತು ಕಥೆಗಳನ್ನು ಸಂಪಾದಿಸಿದರು. ವ್ಯಾಪಾರದ ಜೊತೆಗೆ ನಾಟಕ, ಬಯಲಾಟಗಳನ್ನು ನೋಡುವ ಹವ್ಯಾಸ ಬೆಳೆಸಿಕೊಂಡಿದ್ದರು. ಇದರಿಂದ ಜಾನಪದ ಕೃತಿಗಳನ್ನು ಸಂಗ್ರಹಿಸುವಲ್ಲಿ ಮತ್ತಷ್ಟು ಪ್ರೇರೆಪಣೆ ದೊರಕಿದಂತಾಯ್ತು. ಜಾನಪದ ಸಾಹಿತ್ಯ ಕ್ಷೇತ್ರದಲ್ಲಿ ಶ್ರಮಿಸಿದ ಸಂಗಣ್ಣನವರಿಗೆ "ಜಾನಪದ ತಜ್ಞ" ಎಂಬ ಪ್ರಶಸ್ತಿ ನೀಡಿ ಗೌರವಿಸಲಾಯಿತು.

ಲೌಖಿಕ ಮತ್ತು ಅಲೌಖಿಕ ಜ್ಞಾನದ ಅರಿವನ್ನು "ಹಳ್ಳಿಯ ಪದಗಳು" ಎಂಬ ಸಂಪಾದಿತ ಕೃತಿಯು "ಅನಿಕೇತನ ಪ್ರಜ್ಞೆಯ ಮೂಲಕ ಜನಪದರಿಗೆ ತಿಳಿಸಿ ಕೊಡುತ್ತದೆ. ಸಹಾಯ, ಸಹಕಾರ, ಸಹಬಾಳ್ವೆಯೇ ಬದುಕು" ಎಂಬ ತತ್ವಗಳನ್ನು ಸಂಪಾದಿತ ಕೃತಿಗಳು ವಿವರಿಸುತ್ತವೆ. ಜನಪದರಲ್ಲಿರುವ ಸ್ವಾತಂತ್ರ್ಯದ ಪ್ರಜ್ಞೆ ಮತ್ತು ಬ್ರಿಟಿಷರ ದಬ್ಬಾಳಿಕೆಯನ್ನು "ಹಳ್ಳಿಯ ಪದಗಳು" ಖಂಡಿಸುತ್ತವೆ. ಅಣ್ಣ-ತಂಗಿ, ತಂದೆ-ತಾಯಿಗಳ ರಕ್ತ ಸಂಬಂಧ ಮತ್ತು ಸಮಾಜದ ವಾಸ್ತವ ಸ್ಥಿತಿಯನ್ನು ಈ ಅಧ್ಯಯನದಲ್ಲಿ ಕಾಣುತ್ತೇವೆ. ಒಂದು ಸುಸಂಸ್ಕೃತ ಸಮಾಜದ ಆಚಾರ-ವಿಚಾರಗಳು, ನಿತಿ-ನಿಯಮಾವಳಿಗಳು, ಕಟ್ಟುಪಾಡುಗಳು, ಸಂಸ್ಕೃತಿ ಹಾಗೂ ಪ್ರೀತಿ ವಿಶ್ವಾಸ ಮತ್ತು ಬದುಕಿನ ಪರಿಪೂರ್ಣತೆಯ ಜೀವನದ ಮೌಲ್ಯಿಕ ಅಂಶಗಳನ್ನು ಸಂಗಣ್ಣನವರ ಸಂಪಾದಿತ ಕೃತಿಗಳು ಬಿತ್ತರಿಸುತ್ತವೆ.

"ನವಿಲು ಕುಣಿದಾವ" ಎಂಬ ಕೃತಿಯನ್ನು ಸಂಗಣ್ಣನವರು ತ್ರಿಪದಿಯ ಪ್ರಕಾರದಲ್ಲಿ ಸಂಪಾದಿಸಿದ್ದಾರೆ. ಇದೊಂದು ಹಾಲಿಗೆ ಸಂಬಂಧಿಸಿದ ಸ್ತ್ರೀ ಕೇಂದ್ರಿತ ನೆಲೆಯಲ್ಲಿ ರಚಿತವಾಗಿದೆ. ಗರತಿಯ ಆಸೆ, ಆಕಾಂಕ್ಷೆಗಳು, ನೋವು ನಲಿವುಗಳು, ಮನಸ್ಸಿನ ನಿವೇಧನೆಗಳನ್ನು ಅಭಿವ್ಯಕ್ತ ಪಡಿಸಲಾಗಿದೆ.

"ಸಂಗಣ್ಣನವರಸಂಪಾದಿತ ಕೃತಿಗಳು"- ಕಾಲ್ಪನಿಕ, ಪೌರಾಣಿಕ ಮತ್ತು ನೀತಿ ಕಥೆಗಳನ್ನು ಹೇಳುವುದರ ಮೂಲಕ ಮಾನವೀಯ ಮೌಲ್ಯಗಳನ್ನು ತಿಳಿಸಿ ಕೊಡುವಲ್ಲಿ ಸಹಕಾರಿಯಾಗಿವೆ. ಸಂಭವನೀಯವಲ್ಲದ ಅಸಂಭವನೀಯ ಪಾತ್ರಗಳು ಪ್ರೇಕ್ಷಕರನ್ನು ಆಕರ್ಷಣೆ ಮಾಡುತ್ತವೆ. ನಿರಂಕುಶ ಪ್ರಭುತ್ವದ ರಾಕ್ಷಸಿ ಮನೋಭಾವನೆಯನ್ನು ಅಳಿಸಿ ಸಮಾಜ ಪರ ಕಾಳಜಿಯನ್ನು ಎತ್ತಿ ತೋರಿಸುತ್ತವೆ.

ಮದುವೆಯಾದ ಸ್ತ್ರೀಯು ಭಾರತೀಯ ನಾರಿಧರ್ಮವನ್ನು ಕಾಪಾಡಬೇಕು. ತನ್ನ ಗಂಡನೇ ದೈವ ಎಂದು ಅವನೊಂದಿಗೆ ಕೂಡಿ ಬಾಳ ಬೇಕು. "ಸ್ತ್ರೀಯು ಏಕ ಪತಿ ವ್ರತ ಧರ್ಮ"ವನ್ನು ಪರಿಪಾಲನೆ ಮಾಡಬೇಕು. ಆದರೆ ಗಂಡನಾದವನು ಅಥವಾ ರಾಜ ಎನಿಸಿಕೊಂಡವನು "ಬಹುಪತ್ನಿತ್ವ ಪದ್ಧತಿ"ಯನ್ನು ಅನುಸರಿಸಿರುವುದನ್ನು ಕಾಣುತ್ತೇವೆ. ಪುರುಷ ಪ್ರಧಾನ ವ್ಯವಸ್ಥೆಯ ಅಡಿಯಲ್ಲಿ ಸ್ತ್ರೀಯು ಸಿಲುಕಿ ಶೋಷಣೆಗೊಳಪಟ್ಟಿದ್ದಾಳೆ. ಅದರಿಂದ ಪಾರಾಗಲೂ ಕಾಡು ಮೇಡು ಅಲೆದಾಡುವ ಸ್ಥಿತ್ಯಂತರವನ್ನು ನಾವು ಅಧ್ಯಯನದ ಮೂಲಕ ತಿಳಿದುಕೊಳ್ಳಲು ಸಹಕಾರಿಯಾಗಿವೆ. ಸರ್ವಾಧಿಕಾರಿಯಾಗಿ ವರ್ತಿಸುವ ರಾಕ್ಷಸರ ದಬ್ಬಾಳಿಕೆ, ನಿರಂಕುಶ ಪ್ರಭುತ್ವದ ದೌರ್ಜನ್ಯ, ಕ್ರೌರ್ಯ ಮನೋಪ್ರವೃತ್ತಿಯುಳ್ಳ ವ್ಯಕ್ತಿಗಳ ಅಟ್ಟಹಾಸವನ್ನು ಬುಡ ಸಮೇತ ನಿರ್ನಾಮ ಮಾಡಬೇಕು. ಕಪಟ ಮೋಸ, ವಂಚನೆಯುಳ್ಳ ವ್ಯಕ್ತಿಗಳನ್ನು ಈ ಭೂ ಮಂಡಲದಿಂದಲೇ ಸರ್ವನಾಶ ಮಾಡ ಬೇಕು ಎಂಬ ಸಂದೇಶವನ್ನು ಸಂಪಾದಿತ ಕೃತಿಗಳು ತಿಳಿಸುತ್ತವೆ. ಮನುಷ್ಯನಲ್ಲಿರುವ ದುರಂಹಕಾರ ಗುಣಗಳು, ವೈಷಮ್ಯ, ಕ್ರೌರ್ಯ, ತಾರತಮ್ಯ ಭಾವನೆ

ಮುಂತಾದ ವರ್ತನೆಗಳನ್ನು ಭಿನ್ನ ನೆಲೆಯಲ್ಲಿ ಅಧ್ಯಯಕ್ಕೊಳಪಡಿಸಲಾಗಿದೆ. ಇಂತಹ ವಿಚಾರಧಾರೆಗಳನ್ನು ಬದಿಗೊತ್ತಿ ಮಾನವೀಯ ಗುಣಗಳನ್ನು ಬಿತ್ತುವುದೇ ಈ ಅಧ್ಯಯನದ ಆಶಯವಾಗಿದೆ.

ನಿಸ್ವಾರ್ಥ ಮನೋಭಾವನೆಯುಳ್ಳ ನಿಷ್ಠೆ, ಪ್ರಮಾಣಿಕತೆ, ರಾಜಕೀಯ ಮುತ್ಸದ್ದಿ ಸಾರ್ವಜನಿಕ ಏಳ್ಗೆಗಾಗಿ ಶ್ರಮಿಸಿದ, ಶಿಸ್ತಿನ ಸಿಪಾಯಿ ಹಾಗೂ ಆತ್ಮೀಯ ಒಡನಾಡಿ "ಕೊಂಡಜ್ಜಿ ಬಸಪ್ಪನ" ಆತ್ಮಕಥನವನ್ನು ಸಂಗಣ್ಣನವರು ಸಂಪಾದಿಸುತ್ತಾರೆ. ಇದು ಕೊಂಡಜ್ಜಿಯವರ ಜೀವನದ ಕಹಿ ಮತ್ತು ಸಿಹಿ ಘಟನಾವಳಿಗಳ ಜೊತೆಗೆ ಸಾತ್ವಿಕ ಮುಗ್ಧ ಸ್ವಭಾವವನ್ನು ತಿಳಿಸಿಕೊಡುತ್ತದೆ.

ವಿವಿಧ ಕೃತಿಗಳ ಜೊತೆಗೆ ವೈಶಿಷ್ಠ ಪೂರ್ಣವಾದ ಜನಪದ ಆಡುಭಾಷೆಯ ನಿಘಂಟನ್ನು ರಚಿಸಿರುವುದು ಸಂಗಣ್ಣನವರ ಪ್ರತಿಭೆಗೆ ಸಾಕ್ಷಿಯಾಗುತ್ತದೆ. ಗ್ರಾಮೀಣ ಜನರ ವಿವಿಧ ಕ್ಷೇತ್ರಗಳಲ್ಲಿನ ಜೀವಂತಿಕೆ ಪದಗಳ ಸಂಗ್ರಹದಿಂದ ರಚಿತವಾಗಿದೆ. ಆದುದರಿಂದ ಪರಂಪರಾನುಗತವಾದ ಸಾಂಸ್ಕೃತಿಕ ಮೌಲ್ಯಗಳನ್ನೊಳಗೊಂಡ ಜನಸಮುದಾಯದ ಜೀವಂತ ನೆಲೆಗಳನ್ನು ಈ ನಿಬಂಧದಲ್ಲಿ ಕಟ್ಟಿ ಕೊಡಲಾಗಿದೆ.ಒಟ್ಟಿನಲ್ಲಿ ಸಾಮಾಜಿಕ, ಸಾಂಸ್ಕೃತಿಕ, ಧಾರ್ಮಿಕ ಹಾಗೂ ಸ್ತ್ರೀಶೋಷಣೆ, ಪುರುಷ ಪ್ರಧಾನ ವ್ಯವಸ್ಥೆ, ಮಾನವೀಯ ಮೌಲ್ಯಗಳನ್ನು ಮಾತ್ರ ಮುಖ್ಯ ಫಲಿತಗಳಾಗಿ ಈ ಅಧ್ಯಯನದಲ್ಲಿ ಚರ್ಚಿಸಲಾಗಿದೆ. ಸಾಮಾಜಿಕ ಧೋರಣೆ, ಕರ್ತವ್ಯ ಪ್ರಜ್ಞೆಯನ್ನು ಕಲಾವಿದರ ಜೀವನಾನುಭವಗಳನ್ನು ಕುರಿತು ಚರ್ಚಿಸಲಾಗಿದೆ ಆ ಮೂಲಕ ಸಂಗಣ್ಣನವರಲ್ಲಿದ್ದ ಅಧ್ಯಯನ ಶೀಲತೆ ಮತ್ತು ಸಂಸ್ಕೃತಿ ಕುರಿತು ವಿವಿಧ ರೀತಿಯ ಕಾಳಜಿಗಳನ್ನು ಗ್ರಹಿಸಲಾಗಿದೆ.

## ಅನುಬಂಧಗಳು-೧

### ಅ. ತಿಳಿವಳಿಕೆ ನೀಡಿದವರು

೧. ೦೪-೦೩-೨೦೧೭ರಂದು ಎಂ.ಎಂ.ಶಿವ ಪ್ರಕಾಶರು ಈ ಕೆಳಕಂಡಂತೆ ಹೇಳಿದ್ದಾರೆ. ಮುದೇನೂರು ಸಂಗಣ್ಣನವರು ತುಂಬಾ ಸಾತ್ವಿಕ ಗುಣದವರು ಜನಪದ ಸಾಹಿತ್ಯಕ್ಕೆ ತಮ್ಮನ್ನು ತಾವೇ ಒಳಪಡಿಸಿಕೊಂಡಿದ್ದಾರೆ. ಅವರ ಮನೆಗೆ ಯಾರೇ ಹೋಗಲಿ ಮೊದಲು ಅತಿಥಿಗಳ ಯೋಗ ಕ್ಷೇಮ ನೋಡಿಕೊಂಡು. ಊಟದ ಸಮಯದಲ್ಲಿ ಊಟ ಆದ ನಂತರ ಮಾತು ಕಥೆಯನ್ನು ಹಾಡುತ್ತಿದ್ದರು. ಚಿಕ್ಕವರು ದೊಡ್ಡವರೆನ್ನದೇ ಸೌಹಾರ್ದ ಮನೋಭಾವನೆಯಿಂದ ಅಭಿವ್ಯಕ್ತ ಪಡಿಸುತ್ತಿದ್ದರು.

೨. ೦೩-೦೯-೨೦೧೭ರಂದು ಚಿಗಟೇರಿಯಲ್ಲಿ ಮುದೇನೂರು ಸಂಗಣ್ಣನವರ ಮಗ ಮುದೇನೂರು ಅಶೋಕ ಅವರೊಂದಿಗೆ ಬೇಟಿಯಾದೆನು. "ಮುದೇನೂರು ಸಂಗಣ್ಣನವರು ಸಂಪಾದಿಸಿದ ಕೃತಿಗಳು" ಈ ವಿಷಯದ ಮೇಲೆ ಎಂ.ಫಿಲ್ ಅಧ್ಯಯನ ಮಾಡುತ್ತಿದ್ದೇನೆ. ಈ ವಿಷಯಕ್ಕೆ ಸಂಬಂಧಿಸಿದಂತೆ ನಿಮ್ಮಲ್ಲಿ ಸಹಾಯ ಕೇಳಲು ಬಂದಿದ್ದೇನೆ. ಸಂಗಣ್ಣ ಅವರು ಸಂಪಾದಿಸಿದ ಕೃತಿಗಳನ್ನು ಕೊಡಿ ಎಂದು ಕೇಳಿದೆನು.

ಆಗ ಮುದೇನೂರು ಅಶೋಕ ಅವರು ಹೀಗೆ ಹೇಳಿದರು ನೋಡಿ ಎಂ.ಫಿಲ್ ಪ್ರಬಂಧ ಬರೆಯಲು ಹಲವಾರು ವಿಷಯ ಕ್ಷೇತ್ರಗಳಿವೆ. ಇವರನ್ನೆ ಯಾಕೆ ಆಯ್ಕೆ ಮಾಡಿಕೊಂಡೆ ಎಂದು ಕೇಳಿದರು.

ಸರ್ ಹಲವಾರು ಕಥೆ ಕಾದಂಬರಿ, ನಾಟಕಗಳ ಮೇಲೆ ಪ್ರಬಂಧ ಬರೆಯ ಬಹುದು. ಅಲ್ಲದೆ ಕವಿಗಳು ಸಹ ಇದ್ದಾರೆ. ಒಬ್ಬ ಹೋರಾಟಗಾರನಾಗಿ, ಚಳುವಳಿಯಲ್ಲಿ ದುಮುಕಿ, ಜಾನಪದೀಯ ಅಂಶಗಳನ್ನು ಮೈಗೂಡಿಸಿಗೊಂಡು ಸಂಪಾದಿಸಿದ ವ್ಯಕ್ತಿಗಳಲ್ಲಿ ಇವರು ಕೂಡ ಒಬ್ಬರಾಗಿದ್ದಾರೆ. ಸಮಾಜದಲ್ಲಿನ ಪ್ರತಿಭಾವಂತ ವ್ಯಕ್ತಿಗಳನ್ನು ಗುರುತಿಸಿ, ಅವರಲ್ಲಿನ ಮೌಖಿಕ ಸಾಹಿತ್ಯವನ್ನು ಲಿಖಿತ ರೂಪದಲ್ಲಿ ಸಂಪಾದಿಸಿ ಕೊಟ್ಟ ಏಕೈಕ ವ್ಯಕ್ತಿ ಇವರೊಬ್ಬರೆ. ಹೀಗೆ ಹೇಳಿದಾಗ ಅವರು ಒಪ್ಪಿ ಮನೆಯಲ್ಲಿ ದೊಡ್ಡ ಗ್ರಂಥಾಲಯವೆ ಇದೆ. ನಿನಗೆ ಬೇಕಾದ ಪುಸ್ತಕ ಹುಡುಕಿ ಕೊಡಲು ಸಮಯಬೇಕು ಆದಷ್ಟುಬೇಗ ಹುಡುಕಿ ಕೊಡುತ್ತೇನೆ ಎಂದರು.

## ಆ. ಪರಾಮರ್ಶನ ಗ್ರಂಥಗಳು


೧. ಚಂದ್ರಶೇಖರ ಕಂಬಾರ (ಡಾ), ದೇಶೀಯ ಚಿಂತನ, ಪ್ರಕಾಶಕರು ಅಂಕಿತ ಪುಸ್ತಕ ೫೩, ಶ್ಯಾಮ್ ಸಿಂಗ್ ಕಾಂಪ್ಲೆಕ್ಸ್ ಗಾಂಧಿ ಬಜಾರ್ ಮುಖ್ಯರಸ್ಥೆ ಬಸವನಗುಡಿ, ಬೆಂಗಳೂರು-೫೬೦೦೦೪, ೨೦೦೪.

೨. ಚಿಕ್ಕಣ್ಣ ಯಣ್ಣೆಕಟ್ಟೆ (ಡಾ) ನಾರಾಯಣ ಪಿ.ವಿ. (ಡಾ) (ಪ್ರ.ಸಂ), 'ಚಿಗಟೇರಿಯ ಚೇತನ ಮುದೇನೂರು ಸಂಗಣ್ಣ, ಪ್ರಕಾಶಕರು-ಉದಯ ಭಾನು ಕಲಾ ಸಂಘ, ಬೆಂಗಳೂರು, ೨೦೧೫.

೩. ಮುದೇನೂರು ಸಂಗಣ್ಣ, (ಸಂ), ಗೊಂಬೀಗೌಡರ ಸೂತ್ರದ ಗೊಂಬೆ ಆಟಗಳು, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು-೧೮, ೧೯೯೫.

೪. ಮುದೇನೂರು ಸಂಗಣ್ಣ, ಚಿಗಟೇರಿ ಪದಕೋಶ, ಪ್ರಾದೇಶಿಕ ಜಾನಪದ ರಂಗ ಕಲೆಗಳ ಅಧ್ಯಯನ ಕೇಂದ್ರ, ಉಡುಪಿ, ೧೯೯೭.

೫. ಮುದೇನೂರು ಸಂಗಣ್ಣ, ಗೊಂದಲಿಗರ ದೇವೇಂದ್ರಪ್ಪನವರ ಆಟಗಳು, ಪ್ರಸಾರಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೩

೬. ಮುದೇನೂರು ಸಂಗಣ್ಣ, ಬಾಳಭಿಕ್ಷುಕ, ಶಿವ ಸಂಚಾರ-೧೯೯೮ ಶ್ರೀ ಶಿವಕುಮಾರ, ಹವ್ಯಾಸಿ ಕಲಾ ಸಂಘ, ಸಾಣೇಹಳ್ಳಿ, ೧೯೯೯.

೭. ಮುದೇನೂರು ಸಂಗಣ್ಣ, (ಲೇ), ಕೊಂಡಜ್ಜಿ ಬಸಪ್ಪ, ವೀರಶೈವ ಅಧ್ಯಯನ ಸಂಸ್ಥೆ ಶ್ರೀ ಜಗದ್ಗುರು ತೋಂಟದಾರ್ಯ ಸಂಸ್ಥಾನ ಮಠ, ಗದಗ-೨೦೦೦.

೮. ಮುದೇನೂರು ಸಂಗಣ್ಣ, ನವಿಲು ಕುಣಿದಾವ, ಅಕ್ಷರ ಪ್ರಕಾಶನ, ಸಾಗರ-೧೯೬೯

೯. ರವಿಶಂಕರ್ ವಳಕುಂಜ, ಯಕ್ಷಗಾನ ಪ್ರಸಂಗ ದೃಶ್ಯಾವಳಿ, ವಳಕ್ಕುಂಜ ಪ್ರಕಾಶನ, ೨೦೧೪

೧೦. ವಿರೂಪಾಕ್ಷಗೌಡ ಕೆ. ಮತ್ತು ಮುದೇನೂರು ಸಂಗಣ್ಣ, ಹಳ್ಳಿಯ ಪದಗಳು, ಶ್ರೀ ಕೊಟ್ಟೂರೇಶ ಪ್ರಕಾಶನ, ಹಗರಿಬೊಮ್ಮನಹಳ್ಳಿ, (ಬಳ್ಳಾರಿ ಜಿಲ್ಲೆ) ೧೯೬೮.

೧೧. ವಿರೂಪಾಕ್ಷಿ ಪೂಜಾರಹಳ್ಳಿ (ಡಾ), ಏಕೀಕರಣ ಚಳವಳಿ ಮತ್ತು ಬಳ್ಳಾರಿ ಜಿಲ್ಲೆ, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೧೪

೧೨. ಶಿವಪ್ರಕಾಶ ಎಂ.ಎಂ., 'ನಾಡೋಜ ಮುದೇನೂರು ಸಂಗಣ್ಣ,' ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ-೨೦೧೦

೧೩. ಶಿವಪ್ರಕಾಶ ಎಂ.ಎಂ., (ಸಂ), "ಜಾನಪದ ತಜ್ಞ" ಮುದೇನೂರು ಸಂಗಣ್ಣ, ಲೇಖನಗಳು, ಸಿ.ವಿ.ಜಿ ಇಂಡಿಯಾ, ಬೆಂಗಳೂರು, ೨೦೧೪

೧೪. ಸಿದ್ಧಲಿಂಗಯ್ಯ ಜಿ.ಎಸ್., (ಪ್ರೊ), ಕೃಷ್ಣಯ್ಯ ಎಂ.ಎಚ್(ಪ್ರೊ), (ಸಂ), ಸಾಲು ದೀಪಗಳು, ಪ್ರಕಾಶಕರು, ಸಿ.ಎಚ್.ಭಾಗ್ಯ ರಿಜಿಸ್ಟ್ರಾರ್, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು ೧೯೯೦.

೧೫. ಸುಬ್ಬಣ್ಣ ರೈ.ಎ.(ಡಾ), ಮಾಧವ ಪೆರಾಜೆ(ಡಾ),(ಸಂ), ಸಂಕ್ಷಿಪ್ತ ಆಧುನಿಕ ಕನ್ನಡ ನಿಘಂಟು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೧೩

೧೬. ಸದಾಶಿವಪ್ಪ, ಕುಂ.ಬಾ. (ಲೇ) ದೇವೇಂದ್ರಪ್ಪ ಹಾಗೂ ಜನಪದ ಕಲೆಗಳು, (ಸಂಶೋಧಿತ ಬರಹ), ಮಾಲತೇಶ ಪ್ರಕಾಶನ, ಹರಪನಹಳ್ಳಿ, ೨೦೦೪

೧೭. ಹಳ್ಳಿಕೇರಿ ಎಫ್.ಟಿ.(ಡಾ.) (ಸಂಪಾದಕ), ರಾಜಮಾರ್ಗ. (ಡಾ. ವೀರಣ್ಣ ರಾಜೂರ ಅಭಿನಂದನ ಗ್ರಂಥ), ಪ್ರಕಾಶಕರು ಡಾ. ಎಂ.ಎಂ. ಕಲಬುರ್ಗಿ ಅಧ್ಯಯನ ಸಂಸ್ಥೆ, ಶ್ರೀ ಜಗದ್ಗುರು ತೋಂಟದಾರ್ಯ ಸಂಸ್ಥಾನ ಮಠ, ಗದಗ–೨೦೧೭

